# ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಮಹಿಳೆಯರ ಸ್ಥಾನಮಾನಗಳು

(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)

ಸಂಶೋಧಕ
ಶ್ರೀಮತಿ ಶೈಲಾನಾಗರಾಜ್

ಮಾರ್ಗದರ್ಶಕರು
ಡಾ. ಎನ್. ಸಾವಿತ್ರಿ






ಕರ್ನಾಟಕ ಸಂಘ (ರಿ), ಮಂಡ್ಯ.
...ಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
2007-2008

# ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಮಹಿಳೆಯರ ಸ್ಥಾನಮಾನಗಳು

(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)



ಸಂಶೋಧಕ
ಶ್ರೀಮತಿ ಶೈಲಾನಾಗರಾಜ್

ಮಾರ್ಗದರ್ಶಕರು
ಡಾ. ಎನ್. ಸಾವಿತ್ರಿ




**ಕರ್ನಾಟಕ ಸಂಘ (ರಿ), ಮಂಡ್ಯ.**
**ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
**2007-2008**

## ಮಾರ್ಗದರ್ಶಕರ ಪ್ರಮಾಣಪತ್ರ

"ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಮಹಿಳೆಯರ ಸ್ಥಾನಮಾನಗಳು" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ಶ್ರೀಮತಿ ಶೈಲಾನಾಗರಾಜ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಮೈಸೂರು

ದಿನಾಂಕ: 10-09-08

N. Savithri

(ಡಾ. ಎನ್.ಸಾವಿತ್ರಿ)
ಪ್ರೊಫೆಸರ್, ಇತಿಹಾಸ ವಿಭಾಗ,
ಮಲ್ಲಮ್ಮ ಮರಿಮಲ್ಲಪ್ಪ ಕಲಾ ಮತ್ತು
ವಾಣಿಜ್ಯ ಪ್ರಥಮ ದರ್ಜೆ ಕಾಲೇಜು,
ಮೈಸೂರು

# <u>ಸಂಶೋಧಕನ ಪ್ರಮಾಣ ಪತ್ರ</u>

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007–08 ನೇ ಸಾಲಿಗೆ ಇತಿಹಾಸ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಮಹಿಳೆಯರ ಸ್ಥಾನಮಾನಗಳು : ಒಂದು ಅಧ್ಯಯನ" ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ. ಎನ್. ಸಾವಿತ್ರಿಯವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವ ವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ
ದಿನಾಂಕ : 10-09-08

ಶೈಲಾನಾಗರಾಜ್

(ಶ್ರೀಮತಿ ಶೈಲಾನಾಗರಾಜ್)
ಸಂಶೋಧಕ, ಚರಿತ್ರೆ ವಿಭಾಗ
ಕರ್ನಾಟಕ ಸಂಘ (ರಿ) ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ–ಮಾನ್ಯತೆ ಪಡೆದಿದೆ.)

# ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಮಹಿಳೆಯರ ಸ್ಥಾನಮಾನಗಳು
# (ಕ್ರಿ.ಸ. 973 ರಿಂದ ಕ್ರಿ.ಶ. 1200)

## ವಿಷಯಸೂಚಿ





# ಅಧ್ಯಾಯ 1
# ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಮಹಿಳೆಯರ ಸ್ಥಾನಮಾನಗಳು

**ಪೀಠಿಕೆ**

ಇತಿಹಾಸದ ಅರ್ಥ ವ್ಯಾಪ್ತಿಯು ಇಂದು ಮಹಾರಾಜರ ರಾಜಕೀಯ ಅಧ್ಯಯನದಿಂದ ಜನಸಾಮಾನ್ಯರ ಬದುಕಿನ ಅಧ್ಯಯನವಾಗಿ ವಿಸ್ತೃತಗೊಳ್ಳತೊಡಗಿದೆ. ಇದರಿಂದಾಗಿ ಅರಸರ ಚರಿತ್ರೆಯು ಗೌಣವಾಗಿ ಶ್ರೀ ಸಾಮಾನ್ಯರ ಬದುಕಿಗೆ ಮಹತ್ವ ಪ್ರಾಪ್ತವಾಗಿದೆ. ಕರ್ನಾಟಕದ ಇತಿಹಾಸವು ಅದರ ಸಾಮಾಜಿಕ ಬದುಕಿನ ವಿವಿಧ ಆಯಾಮಗಳ ಹಿನ್ನಲೆಯಲ್ಲಿ ರಚನೆ ಗೊಂಡಿರುವುದು ತೀರ ವಿರಳ. ಇತಿಹಾಸ ರಚನೆಗೆ ಇಂದು ಸಾಧನ-ಸಾಮಗ್ರಿಗಳ ಕೊರತೆ ಇಲ್ಲವಾದರೂ ಅದಕ್ಕಿರುವ ಅಡ್ಡಿ ಆತಂಕಗಳು ಮಾತ್ರ ಹೇರಳವಾಗಿದೆ. ಇಂದು ಇತಿಹಾಸ ತಜ್ಞರು ಆ ಆತಂಕಗಳನ್ನು ನಿವಾರಿಸಿಕೊಂಡು ದಿಟ್ಟವಾದ ಹೆಜ್ಜೆಯನ್ನು ಇಡುವುದರೊಂದಿಗೆ ಹೊಸ ಹೊಸ ದೃಷ್ಟಿಕೋನದಿಂದ ಇತಿಹಾಸದ ಚಿಂತನೆಗಳು ನಡೆದಿರುವುದು, ನಡೆಯುತ್ತಿರುವುದು ಕಂಡುಬರುತ್ತದೆ.

ಇತಿಹಾಸ ಪುಟಗಳಲ್ಲಿ ಮಹಿಳೆಯರ ಸ್ಥಾನವನ್ನು ಕುರಿತು ಪ್ರಾರಂಭದ ದಶಕದಲ್ಲಿ ಅಷ್ಟಾಗಿ ಪರಿಗಣಿಸಿದಂತೆ ಕಂಡುಬರುವುದಿಲ್ಲ. ಅವಳಿಗೆ ಅಷ್ಟಾಗಿ ಸ್ಥಾನವನ್ನು ನೀಡದೆ ಪುರುಷ ಪ್ರಧಾನವಾದ ಸಮಾಜದಲ್ಲಿ ಅವಳನ್ನು ಕೀಳಾಗಿ ಕಾಣುವುದಲ್ಲದೇ ಅವಳನ್ನು ನಾಲ್ಕು ಗೋಡೆಗಳ ಮಧ್ಯದಲ್ಲಿ ಬಂದಿಯಾಗಿಟ್ಟಿರುವುದನ್ನು ಹಾಗೂ ಸ್ವತಂತ್ರ್ಯವನ್ನು ನೀಡದೆ ಅವಳನ್ನು ಅಡುಗೆಯ ಮನೆಗೆ ಮಾತ್ರ ಸೀಮಿತಳನ್ನಾಗಿ ಮಾಡಲಾಗಿದ್ದರೂ ಅವಳಿಗೆ ಸಮಾಜದಲ್ಲಿ ಉನ್ನತವಾದ ಸ್ಥಾನ ಮತ್ತು ಗೌರವವಿತ್ತು. ಅವಳು ಪ್ರಾಚೀನ ಕಾಲದಿಂದಲೂ ರಾಜಕೀಯದಲ್ಲಿ, ಆಡಳಿತದಲ್ಲಿ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸಿ ಪತಿಯೊಂದಿಗೆ ಹೆಗಲಿಗೆ ಹೆಗಲು ಕೊಟ್ಟು ಕಾರ್ಯವನ್ನು ನಿರ್ವಹಿಸಿರುವಳೆಂದು ಅವಳನ್ನು ಕುರಿತು ಅಲ್ಪಸ್ವಲ್ಪ ಅಧ್ಯಯನಗಳು ನಡೆದಿರುವುದುಂಟು. ಆದರೆ ಕಲ್ಯಾಣದ ಚಾಲುಕ್ಯರ ಕಾಲವನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರ ಶಾಸನಗಳನ್ನು ಆಧಾರವಾಗಿಟ್ಟು ಕೊಂಡು ಬಂದಿರುವ ಪ್ರಬಂಧಗಳಿಲ್ಲ. ಹೀಗಾಗಿ ಆ ಕಾಲದ ಮಹಿಳೆಯರ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ.

**1.1 ಈವರೆಗಿನ ಅಧ್ಯಯನಗಳು**

ಆದರೆ ಮಹಿಳೆಯರ ಸ್ಥಾನಮಾನವನ್ನು ಕೇಂದ್ರವಾಗಿ ಇಟ್ಟುಕೊಂಡು ನಮ್ಮಲ್ಲಿ ಅಧ್ಯಯನ ಗಳು ನಡೆದಿಲ್ಲವೆಂದೇನು ಅಲ್ಲ. ಭಾರತೀಯ ಹಿನ್ನಲೆಯಲ್ಲಿ E.M.White ಎನ್ನುವವರು 1924ರಲ್ಲಿ

ಪ್ರಕಟಿಸಿದ Women in World History her Place in the Great Religion, Otto Rothfeld ಅವರು 1929 ರಲ್ಲಿ ಪ್ರಕಟಿಸಿದ Women of India, R.C. Majumdar ಅವರು 1953 ರಲ್ಲಿ ಪ್ರಕಟಿಸಿದ Great Women of India, Margaret Cormack ಅವರು 1953ರಲ್ಲಿ ಪ್ರಕಟಿಸಿದ The Hindu Women, P.Thomas ಅವರು 1964 ರಲ್ಲಿ ಪ್ರಕಟಿಸಿದ Indian Women through the Ages, A.S. Altekar ಅವರು 1962ರಲ್ಲಿ ಪ್ರಕಟಿಸಿರುವ Position of Women in Hindu Civilization ಸಾಲೆ ತೊರೆಯವರು ಸ್ಟೇಟಸ್ ಆಫ್ ಉಮನ್, ಮರ್ರ್ರೆ ಮಾರ್ಟಿವರ ಅವರು 1962ರಲ್ಲಿ ಪ್ರಕಟಿಸಿದ Women in Manu and his Seven Commentators, Devaki Jain ಅವರು 1975ರಲ್ಲಿ ಪ್ರಕಟಿಸಿದ Indian Women ಎಂಬ ಕೃತಿಗಳು ಹೊರಬಂದಿವೆ.

ಆದರೆ ಕರ್ನಾಟಕವನ್ನು ಕೇಂದ್ರವಾಗಿಟ್ಟುಕೊಂಡು ಹೊರಬಂದಿರುವ ಕೃತಿಗಳಲ್ಲಿ ಪಿ.ಬಿ.ದೇಸಾಯಿಯವರ 'ಕನ್ನಡ ನಾಡಿನಲ್ಲಿ ಮಿಂಚಿದ ಮಹಿಳೆಯರು' ಕೆ.ಭುಜಬಲಿ ಶಾಸ್ತ್ರೀಯವರ ಆದರ್ಶ ಜೈನ ಮಹಿಳೆಯರು, ಸರೋಜಿನಿ ಮಹಿಷಿಯವರ 'ಕರ್ನಾಟಕದ ಕವಯಿತ್ರಿಯರು', ಚನ್ನಕ ಎಲಿಗಾರವರ ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪ್ರಾಚೀನ ಕರ್ನಾಟಕದ ರಾಣಿಯರು, ಎನ್.ಸರಸ್ವತಿಯವರ The Position of Women during Vijayanagara period ಅವರ The Position of Women during Hoysal period, ಚಿದಾನಂದಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಎಂ.ಬಿ. ಪದ್ಮಾ ಅವರ The Position of Women in Medieval Karnataka, ಡಾ.ಬಿ.ಎನ್.ಶೇಠೆ ಅವರ ಕರ್ನಾಟಕದಲ್ಲಿ ಸತಿ ಪದ್ಧತಿ, ಬಸವರಾಜ ಕಲ್ಲುಡಿಯವರ ಮಹಾಸತಿ ಆಚರಣೆ: ಒಂದು ಅಧ್ಯಯನ, ಶೈಲಜಾ ಉಡಚಣ ಅವರ ವಚನಕಾರರ ದೃಷ್ಟಿಯಲ್ಲಿ ಸ್ತ್ರೀ ಎಂಬ ಮಹಾಪ್ರಬಂಧಗಳ ಜೊತೆಯಲ್ಲಿ ಹಲವಾರು ಮಹಿಳೆಯರನ್ನು ಕೇಂದ್ರ ವಾಗಿಟ್ಟುಕೊಂಡು ಕಾದಂಬರಿಗಳು ಪ್ರಕಟಗೊಂಡಿರುವುದುಂಟು. ಅವುಗಳಲ್ಲಿ ನಾಟ್ಯರಾಣಿ ಶಾಂತಲೆ, ಅತಿಮಬ್ಬೆ, ಸುಗ್ಗಲೆ,... ಅಲ್ಲದೇ ಕನ್ನಡ ಸಾಹಿತ್ಯ ಪರಿಷತ್ತು 2002 ರಲ್ಲಿ ಮಹಿಳಾ ವರ್ಷದ ಪ್ರಕಟಣೆಗಳಾಗಿ ಪ್ರಕಟಿಸಿರುವ ಮಹಿಳೆ ಮತ್ತು ಧರ್ಮ, ಮಹಿಳೆ ಮತ್ತು ಶಿಕ್ಷಣ, ಮಹಿಳೆ ಮತ್ತು ಅಲಂಕರಣ, ಮಹಿಳೆ ಮತ್ತು ಕಲೆ, ಮಹಿಳೆ ಮತ್ತು ಕನ್ನಡ, ಮಹಿಳೆ ಮತ್ತು ವಿವಾಹ ಕೃತಿಗಳು ಪ್ರಕಟಗೊಂಡಿವೆ. ಮೇಲಿನ ಗ್ರಂಥಗಳು ಅಲ್ಲದೇ ಹಲವಾರು ಲೇಖನಗಳು ಬೆಳಕು ಕಂಡಿವೆ.

ಅವುಗಳಲ್ಲಿ Some Women Administraters of Mediaeval Karnataka, ಎಮಿನಂಟ್ ಕ್ವೀನ್ಸ್ ಇನ್ ಕರ್ನಾಟಕ, ಚಾಲುಕ್ಯ ಕ್ವೀನ್ಸ್, ನೊಳಂಬ ಮಹಾದೇವಿ, ದಾನಚಿಂತಾಮಣಿ ಅತ್ತಿಮಬ್ಬೆ ಸಾವಿಯ್ಯಾಲೆ, ಶಾಂತಲೆ, ಸುಗ್ಗಲದೇವಿಯ ತೊರಗಲ್ಲು ಶಾಸನ, ವರದಾನಿ ಗುಡ್ಡಮ್ಮ, ಪಂಪನ ತಾಯಿ ಬಣಬ್ಬೆ.

ಈ ಮೇಲಿನ ಗ್ರಂಥಗಳನ್ನು, ಲೇಖನಗಳನ್ನು ಅವಲೋಕಿಸಿದಾಗ ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕದ ಮಹಿಳೆಯರನ್ನು ಕುರಿತು ಸಾಕಷ್ಟು ಅಧ್ಯಯನಗಳು ಆಗಿರುವುದು ಕಂಡುಬರುತ್ತದೆ. ಆದರೆ ಕಲ್ಯಾಣದ ಚಾಲುಕ್ಯರ ಕಾಲವನ್ನು ಗಮನದಲ್ಲಿಟ್ಟು ಅವರ ಕಾಲದ ಶಾಸನಗಳ ಆಧಾರದ ಮೇಲೆ ಮಹಿಳೆಯರ ಇತಿಹಾಸವನ್ನು ಸಮಗ್ರವಾಗಿ ರೂಪಿಸಬೇಕಾಗಿರುವುದು ಅವಶ್ಯಕ ಎನ್ನುವುದನ್ನು ಮನಗೊಂಡು ಕಲ್ಯಾಣದ ಚಾಲುಕ್ಯರ ಶಾಸನಗಳನ್ನು ಆಧರಿಸಿ "ಕಲ್ಯಾಣದ ಚಾಲುಕ್ಯರ ಕಾಲದ ಮಹಿಳೆಯರ ಸ್ಥಾನಮಾನ" ಎಂಬ ಈ ಮಹಾಪ್ರಬಂಧವನ್ನು ರಚಿಸಲಾಗಿದೆ.

ನಮ್ಮ ಅಧ್ಯಯನವು ಕಲ್ಯಾಣದ ಚಾಲುಕ್ಯರ ಕಾಲದಲ್ಲಿಯೇ ಮಹಿಳೆಯರ ಸ್ಥಾನಮಾನವನ್ನು ಕುರಿತು ಆಗಿರುವುದರಿಂದ ಅವರ ವಿವಿಧ ಚಟುವಟಿಕೆಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ. ಚಾಲುಕ್ಯರ ಶಾಸನಗಳಲ್ಲದೇ ಅವರ ಸಾಮಂತರಾಗಿದ್ದ ಹೊಯ್ಸಳರ, ಸವದತ್ತಿಯ ರಟ್ಟರ, ಸಾಂತಾರರ, ಗೋವೆಯ ಕದಂಬರ, ಹಾನಗಲ್ಲಿನ ಕದಂಬರ, ಕುರುಗೋಡು ಸಿಂಧರ, ನೊಳಂಬದ ಪಲ್ಲವರ, ಉಚ್ಚಂಗಿಯ ಪಾಂಡ್ಯರ ಶಾಸನಗಳನ್ನು ಸಹ ಸಾಧ್ಯವಾದ ಮಟ್ಟಿಗೆ ಪರಿಶೀಲಿಸಿ ಮಹಿಳೆಯರ ಕುರಿತು ಸಮಗ್ರವಾದ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ.

ನಮ್ಮ ಅಧ್ಯಯನಕ್ಕೆ ಕ್ರಿ.ಶ. 973ರಲ್ಲಿ ಚಾಲುಕ್ಯ ಮನೆತನದ ಸ್ಥಾಪನೆಯಿಂದ ಕ್ರಿ.ಶ. 1200ರ ವರೆಗಿನ ಕಾಲಮಿತಿಯನ್ನು ಹಾಕಿಕೊಳ್ಳಲಾಗಿದೆ ಅದಕ್ಕೆ ನಿರ್ದಿಷ್ಟವಾದ ಕಾರಣವಿದೆ. ಎರಡನೆಯ ತೈಲನು ರಾಷ್ಟ್ರಕೂಟ ಕೊನೆಯ ಅರಸನನ್ನು ಸೋಲಿಸಿ ಕ್ರಿ.ಶ. 973ರಲ್ಲಿ ಮಾನಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತವನ್ನು ಪ್ರಾರಂಭಿಸಿದನು. ಹೀಗಾಗಿ ಪ್ರಾರಂಭದ ಘಟ್ಟವನ್ನು ಕ್ರಿ.ಶ. 973 ಎಂದು ಪರಿಗಣಿಸಲಾಗಿದೆ. ಕ್ರಿ.ಶ. 1198 ರವರೆಗೆ ಚಾಲುಕ್ಯರ ಶಾಸನಗಳು ಲಭ್ಯವಾಗುವುದರಿಂದ ಆ ಕಾಲವನ್ನು 1200 ರವರೆಗೆ ಇಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

ಈ ಕಾಲವು ಒಂದು ಮುಖ್ಯ ಘಟ್ಟ, ಸಂಕೀರ್ಣವಾದ ಕಾಲ. ರಾಜಕೀಯವಾಗಿ ಕಲ್ಯಾಣದ ಚಾಲುಕ್ಯರ ಚೋಳರೊಂದಿಗಿನ ನಿರಂತರ ಹೋರಾಟದಿಂದಾಗಿ, ಅನೇಕ ಸಾಮಂತರು ಸ್ವತಂತ್ರವಾಗಲು ಪ್ರಯತ್ನಿಸಿದರು. ಹೊಯ್ಸಳರು, ಯಾದವರು, ಸೇವುಣರು ಮುಂದೆ ಸ್ವತಂತ್ರರಾಗಿ ಸಾಮ್ರಾಜ್ಯವನ್ನು ಕಟ್ಟಿದರು.

ಚಾಲುಕ್ಯರ ಕಾಲವು ಧಾರ್ಮಿಕವಾಗಿಯೂ ಸ್ಥಿತ್ಯಂತರದ ಕಾಲ ಉತ್ತರ ಕರ್ನಾಟಕದಲ್ಲಿ ಲಾಕುಳ, ಶೈವ ಪಾಶುಪತ ಮತ್ತು ಕಾಪಾಲಿಕರ ಪ್ರಭಾವವು ಪ್ರಬಲವಾಗಿತ್ತು. ಜೈನರಿಗೆ ಪ್ರೋತ್ಸಾಹವು ಕಡಿಮೆಯಾಗ ತೊಡಗಿತ್ತು. ಶೈವ ಪಂಥದಲ್ಲಿಯೇ ಅನೇಕ ಪ್ರಭೇದಗಳು ಸಂಘರ್ಷಕ್ಕೆ ಇಳಿದವು. ಇಂತಹ ಸಮಯದಲ್ಲೇ ವೀರಶೈವ ಧರ್ಮವು ರೂಪುಗೊಂಡಿತು. ದಕ್ಷಿಣ ಕರ್ನಾಟಕದಲ್ಲಿ ಶ್ರೀ ರಾಮಾನುಜಾಚಾರ್ಯರ ಪ್ರಭಾವದಿಂದ ಶ್ರೀ ವೈಷ್ಣವ ಧರ್ಮವು ಪ್ರಬಲವಾಗ ತೊಡಗಿತು. ಸ್ವಲ್ಪ ಸಮಯದಲ್ಲಿಯೇ ವೀರಶೈವ ಹಾಗೂ ಶ್ರೀ ವೈಷ್ಣವ ಧರ್ಮ ಜನರ ವಿಶ್ವಾಸವನ್ನು ಗಳಿಸಿ ಪ್ರಬಲವಾಗ ತೊಡಗಿದವು. ಹೀಗಾಗಿ ಧಾರ್ಮಿಕವಾಗಿಯೂ ಈ ಕಾಲವು ಪ್ರಮುಖವಾಗಿತ್ತು. ಇಂತಹ ಸಂದಿಗ್ಧತೆಯ ಕಾಲದಲ್ಲಿ ಮಹಿಳೆಯ ಸ್ಥಿತಿಯನ್ನು ಕುರಿತು ಅಧ್ಯಯನ ಮಾಡುವುದು ಈ ಪ್ರಬಂಧದ ಪ್ರಮುಖ ಉದ್ದೇಶವಾಗಿದೆ.

### 1.2 ಅಧ್ಯಯನದ ಆಕರಗಳು

ಒಂದು ನಾಡಿನ ಇತಿಹಾಸವನ್ನು ತಿಳಿದುಕೊಳ್ಳಲು ಹಲವಾರು ಸಾಧನ ಸಾಮಗ್ರಿಗಳ ಮೊರೆ ಹೋಗಬೇಕಾದುದು ಅನಿವಾರ್ಯ. ಇತಿಹಾಸದ ಅಧ್ಯಯನಕ್ಕೆ ಅತ್ಯಮೂಲ್ಯವಾದ ಲಿಖಿತ ದಾಖಲೆ ಗಳೆಂದರೆ ಶಾಸನಗಳು, ಇವು ಅಂದಿನ ರಾಜಕೀಯ, ಆರ್ಥಿಕ ಸಾಮಾಜಿಕ, ಸಾಂಸ್ಕೃತಿಕ, ಇತ್ಯಾದಿ ಯಾವುದೇ ಅಧ್ಯಯನಕ್ಕೆ ಅವಶ್ಯಕವಾಗಿವೆ. ಹೀಗಾಗಿ ನಮ್ಮ ಅಧ್ಯಯನಕ್ಕೆ ಅವಶ್ಯಕವಾಗಿವೆ. ಹೀಗಾಗಿ ನಮ್ಮ ಅಧ್ಯಯನಕ್ಕೆ ಶಾಸನಗಳೇ ಮೂಲ ಆಕರಗಳಾಗಿವೆ. ಜೊತೆಗೆ ಆ ಕಾಲದ ಸಾಹಿತ್ಯ ಕೃತಿಗಳ ನೆರವನ್ನು ಪ್ರಾಸಂಗಿಕವಾಗಿ ಪಡೆದುಕೊಳ್ಳಲಾಗಿದೆ. ಅಲ್ಲದೆ ಆ ಕಾಲದ ಸ್ಮಾರಕಗಳ ಸಹಾಯವನ್ನು ಪಡೆಯಲಾಗಿದೆ.

#### 1.2.1 ಶಾಸನಗಳು

ಶಾಸನಗಳು ನಮ್ಮ ಪ್ರಾಚೀನ ಬದುಕಿನ ಸಮಸ್ತ ಸಂವೇದನೆಗಳ ಪ್ರಾಮಾಣಿಕ ಧ್ವನಿಗಳಾಗಿರುವುದರಿಂದ ಅಲ್ಲಿ ಈ ನಾಡಿನ ಜನಜೀವನವು ಅಭಿವ್ಯಕ್ತಗೊಂಡಿರುವಂತೆ ಪ್ರಾಯಶಃ

ಇನ್ನೆಲ್ಲೂ ವ್ಯಕ್ತವಾಗಿಲ್ಲ. ಆದ್ದರಿಂದಲೇ ಅವು ಇತಿಹಾಸ ಸಂಶೋಧನೆಯ ಪ್ರತಿ ಹಂತದಲ್ಲಿಯೂ ಅಧಿಕೃತ ದಾಖಲೆಗಳಾಗಿವೆ ಎಂದು ದಿ ಸ್ಕಲ್ಕರ ಎಂಬ ವಿದ್ವಾಂಸರು ತಿಳಿಸಿದ್ದಾರೆ.

ಭಾರತೀಯ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಸಂಸ್ಕೃತ ಸಾಹಿತ್ಯದಂತೆಯೇ ಶಾಸನ ಸಾಹಿತ್ಯವೂ ವಿಷಯದ ಗಣಿಯಾಗಿದೆ. ಭಾರತೀಯರ ಜೀವನ ಮತ್ತು ಆಲೋಚನೆಗಳ ಬೇರೆ ಬೇರೆ ಕೋನಗಳ ಮೇಲೆ ಅವು ಸಾಕಷ್ಟು ಬೆಳಕನ್ನು ಬೀರುತ್ತದೆ. ಭಾರತೀಯ ಸಂಸ್ಕೃತಿಯ ಪ್ರಾಚೀನ ಭಾರತದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಇತಿಹಾಸದ ಅಭ್ಯಾಸಗಳು ತಮ್ಮ ಜ್ಞಾನದ ಕೊರತೆಯನ್ನು ಶಾಸನಗಳ ಅಭ್ಯಾಸದಿಂದ ಹೋಗಲಾಡಿಸಿಕೊಳ್ಳಬಹುದು ಎಂದು ಹೇಳಿರುವುದು ಸಮಂಜಸವಾಗಿದೆ.[1]

### 1.3 ಕಲ್ಯಾಣದ ಚಾಲುಕ್ಯರ ಶಾಸನಗಳು

ಕಲ್ಯಾಣದ ಚಾಲುಕ್ಯರ ಶಾಸನಗಳು ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ತಮಿಳುನಾಡು, ಕೇರಳ ರಾಜ್ಯಗಳಲ್ಲಿ ಲಭ್ಯವಾಗುತ್ತವೆ. ಕರ್ನಾಟಕದಲ್ಲಿ ಅತ್ಯಧಿಕ ಶಾಸನಗಳು ಲಭ್ಯವಾದರೆ ಅವರು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ಬೀದರ ಜಿಲ್ಲೆಯ ಬಸವಕಲ್ಯಾಣದ ಅಕ್ಕಪಕ್ಕದಲ್ಲಿ ಅಂದರೆ ಬೀದರ್ ಜಿಲ್ಲೆಯಲ್ಲಿ ಅವರ ಶಾಸನಗಳು ಅತೀ ವಿರಳ ಇದಕ್ಕೆ ಕಾರಣವೇನು? ತಿಳಿಯದು. ಉತ್ತರ ಕರ್ನಾಟಕದಲ್ಲಿಯೇ ಪ್ರಬಲವಾದ ಸಾಮ್ರಾಜ್ಯವನ್ನು ಹೊಂದಿದ ಇವರ ಶಾಸನಗಳು ಬೆಂಗಳೂರು, ಮೈಸೂರು, ತುಮಕೂರು, ಚಿಕ್ಕಮಗಳೂರು ಜಿಲ್ಲೆಗಳಲ್ಲಿಯೂ ಸಿಗುವುದನ್ನು ಕಾಣಬಹುದು. ಕಲ್ಯಾಣದ ಚಾಲುಕ್ಯರ ಶಾಸನಗಳು ಈವರೆಗೆ South Indian Inscriptions IX, XI, XV, XVIII, XX ನೇಯ ಸಂಪುಟಗಳು IV, V, VIII, IX, Epigraphia Indica, Indian Antiquary ಸಂಪುಟ –I, III, IV, V, VI, VIII, IX, X, XIV, Annual Report on South Indian Epigraphy and Annual Report on Indian Epigraphy. ಕನ್ನಡ ಸಂಶೋಧನಾ ಸಂಸ್ಥೆಯವರು ಪ್ರಕಟಿಸಿದ ಬಳ್ಳಾರಿ ಜಿಲ್ಲೆಯ ಶಾಸನಗಳು, ಕೊಪ್ಪಳ ಜಿಲ್ಲೆಯ ಶಾಸನಗಳು, ರಾಯಚೂರು ಜಿಲ್ಲೆಯ ಶಾಸನಗಳು, ಆಂಧ್ರಪ್ರದೇಶದ ಕನ್ನಡ ಶಾಸನಗಳು ಭಾಗ–1 &2, ಮಹಾರಾಷ್ಟ್ರದ ಕನ್ನಡ ಶಾಸನಗಳು ಡಾ.ಎಂ.ಎಂ. ಕಲ್ಬುರ್ಗಿಯವರು ಸಂಪಾದಿಸಿದ ಧಾರವಾಡ ಜಿಲ್ಲೆಯ ಶಾಸನಸೂಚಿ, ಧಾರವಾಡ ತಾಲ್ಲೂಕು ಶಾಸನಗಳು, ವಿಜಾಪುರ ಜಿಲ್ಲೆಯ ಶಾಸನಸೂಚಿ ಗ್ರಂಥಗಳು, ಶ್ರೀಮತಿ ಹನುಮಾಕ್ಷಿ ಗೂಗಿ ಅವರು ಪ್ರಕಟಿಸಿರುವ ಕಲ್ಬುರ್ಗಿ ಜಿಲ್ಲೆಯ ಶಾಸನಗಳು

ಹಾಗೂ ಸರಪುರ ತಾಲೂಕಿನ ಶಾಸನಗಳು ಗ್ರಂಥಗಳಲ್ಲಿ ಅಲ್ಲದೆ ಕೆ.ಜಿ. ಕುಂದಣಗಾರವರ Inscriptions of Northern Karnataka and Kolhapur State, S.H.Ritti & Others Inscriptions from Nanded District, Insriptions from Solapur District, Kannada Inscriptions of Koppal, Selected Kannada Inscriptions ಎಂಬ ಹಲವಾರು ಗ್ರಂಥಗಳು, ವಿವಿಧ ನಿಯತಕಾಲಿಕೆಗಳಲ್ಲಿ ಶಾಸನಗಳು ಪ್ರಕಟವಾಗಿದ್ದು ಅವುಗಳನ್ನು ನಮ್ಮ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಕಲ್ಯಾಣದ ಚಾಲುಕ್ಯರ ಬಹಳಷ್ಟು ಶಾಸನಗಳು ದಾನಶಾಸನಗಳಾಗಿವೆ. ಇವುಗಳಲ್ಲದೆ ಕೆಲವು ವೀರಗಲ್ಲು ನಿಶಧಿಗಳ ಮೇಲೆಯೂ ಶಾಸನಗಳಿದ್ದು ಅವುಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಆದರೆ ಕಲ್ಯಾಣದ ಚಾಲುಕ್ಯರ ಎಷ್ಟೋ ಶಾಸನಗಳು ಈವರೆಗೆ ಪ್ರಕಟವಾಗಿಲ್ಲ. ಅನೇಕ ಶಾಸನಗಳು ಜನರ ಅಜ್ಞಾನ, ಅವಜ್ಞಗಳಿಂದಾಗಿ ಒಡೆದೋ, ಅಳಿಸಿಯೋ ಹೋಗಿವೆ. ಆದರೂ ಅವರ ಶಾಸನಗಳು ಮಹತ್ವದ್ದಾಗಿದ್ದು ಅವುಗಳಿಂದ ದೊರೆಯುವ ವಿಷಯವು ಮಹತ್ವವಾಗಿದೆ. ಹೀಗೆ ದೊರೆಯುವ ಮಾಹಿತಿಯಿಂದ ಅವರ ಕಾಲದ ಸ್ತ್ರೀಯರ ಸ್ಥಾನಮಾನವನ್ನು ಕುರಿತು ವಿವೇಚಿಸಲು ಪ್ರಯತ್ನಿಸಲಾಗಿದೆ.

**1.4 ಸ್ಮಾರಕಗಳು**

ಸ್ಮಾರಕಗಳು ಒಂದು ದೇಶದ ಸಂಸ್ಕೃತಿಯ ನಿಜವಾದ ಪ್ರತಿಕೃತಿಗಳು ಅನೇಕ ಸಲ ಶಾಸನ ಮತ್ತು ಸಾಹಿತ್ಯ ಕೃತಿಗಳಿಂದ ಅರಿಯದೇ ಹೋದ ಅಂಶಗಳನ್ನು ಸ್ಮಾರಕಗಳ ಅಧ್ಯಯನದಿಂದ ತಿಳಿಯಬಹುದು. ಚಾಲುಕ್ಯರ ಕಾಲದ ದೇವಾಲಯಗಳು ಮತ್ತು ಇತರ ಸ್ಮಾರಕಗಳಿಂದ ಅಂದಿನ ಮಹಿಳೆಯರು ಉಪಯೋಗಿಸುತ್ತಿದ್ದ ವಿವಿಧ ನಮೂನೆಯ ಬಟ್ಟೆಗಳು, ತಲೆಯ ಆಭರಣ, ಕರ್ಣಾಭರಣ, ಮೂಗಿಗೆ ಧರಿಸುವ ಆಭರಣಗಳು, ಕಂಠಾಭರಣ, ಕೈಗೆ ಧರಿಸುವ ಆಭರಣಗಳನ್ನು ಅವರು ಅಲಂಕಾರಕ್ಕಾಗಿ ಉಪಯೋಗಿಸುತ್ತಿದ್ದರು. ಉಂಗುರಗಳ ಶೃಂಗಾರ, ಕನ್ನಡಿ ಮುಂತಾದ ಅಲಂಕಾರಿಕ ವಿಷಯಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖಗಳಿಲ್ಲ. ಅವುಗಳನ್ನು ನಾವು ಸಾಹಿತ್ಯ ಇಲ್ಲವೇ ಸ್ಮಾರಕಗಳಲ್ಲಿಯೇ ಕಾಣಬೇಕಾಗುತ್ತದೆ. ಹೀಗಾಗಿ ಸ್ಮಾರಕಗಳು ನಮ್ಮ ಅಧ್ಯಯನದ ಉಪಯುಕ್ತ ವಾದ ಆಧಾರಗಳಾಗಿ ಪರಿಣಮಿಸಿವೆ.

ಸ್ಮಾರಕ ಶಿಲೆಗಳಲ್ಲಿ ಮಾಸ್ತಿಕಲ್ಲುಗಳು (ಸತಿಗಲ್ಲುಗಳು) ಅಂದಿನ ಸ್ತ್ರೀಯರು ಪತಿಯ ಸಾವಿನೊಂದಿಗೆ ಸಹಭಾಗಿತ್ವ ವಹಿಸಿರುವುದರ ಪ್ರತೀಕವಾಗಿವೆ. ಸತಿ ಹೋದವಳ ಬಗ್ಗೆ ನಮ್ಮ ಸಮಾಜವು ತುಂಬಾ ಗೌರವವನ್ನು ತೋರುತ್ತಿದ್ದಿತ್ತು. ಜೊತೆಗೆ ಈ ಪದ್ಧತಿಗೆ ಪೋಷಕವಾದ ನಮ್ಮ ಸಮಾಜದ ಮಾನಸಿಕ ಹಿನ್ನಲೆ 'ಸತಿ' ಎನಿಸಿಕೊಳ್ಳುವಲ್ಲಿ ಸ್ತ್ರೀಯರಿಗಿದ್ದ ಆನಂದ ಮುಂತಾದವುಗಳ ಪರಿಚಯವಾಗುತ್ತದೆ.

### 1.5 ಸಾಹಿತ್ಯ

ಇತಿಹಾಸ ರಚನೆಯಲ್ಲಿ ಸಾಹಿತ್ಯ ಕೃತಿಗಳೂ ತುಂಬ ಮಹತ್ವವನ್ನು ಪಡೆದಿವೆ. ಕವಿಗಳು ತಮ್ಮ ಕಾವ್ಯ, ಪುರಾಣಗಳಲ್ಲಿ ಆಯಾ ಕಾಲದ ಜನಜೀವನವನ್ನು ಕುರಿತು ಬಹುಸೂಕ್ಷ್ಮವಾಗಿ ಪ್ರತಿಪಾದಿಸಿದ್ದಾರೆ. ಆದ್ದರಿಂದಲೇ ಸಾಹಿತ್ಯವನ್ನು ಜನಜೀವನದ ಪ್ರತಿಬಿಂಬವೆನ್ನಲಾಗಿದೆ. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಸಂಸ್ಕೃತ ಹಾಗೂ ಕನ್ನಡ ಸಾಹಿತ್ಯ ಕೃತಿಗಳು ಬೆಳಕಿಗೆ ಬಂದವು. ಅವುಗಳಲ್ಲಿ ಕಾಶ್ಮೀರದ ಕವಿ ಬಿಲ್ಹಣನ 'ವಿಕ್ರಮಾಂಕದೇವ ಚರಿತೆ', ಮೂರನೇ ಸೋಮೇಶ್ವರನ 'ಮಾನಸೋಲ್ಲಾಸ', ಹಾಗೂ 'ವಿಕ್ರಮಾಂಕಾಭ್ಯುದಯ', ವಿಜ್ಞಾನೇಶ್ವರ 'ಮಿತಾಕ್ಷರ', ಕಲ್ಹಣನ 'ರಾಜತರಂಗಿಣಿ', ಎರಡನೆ ಚಾವುಂಡರಾಯನ 'ಲೋಕೋಪಕಾರಂ', ನಯಸೇನನ 'ಧರ್ಮಾಮೃತ', ಬ್ರಹ್ಮ ಶಿವನ 'ಸಮಯ ಪರೀಕ್ಷೆ', ಪಂಪನ 'ಪಂಪಭಾರತ', ರನ್ನನ 'ಗದಾಯುದ್ಧ'ಗಳು ಪ್ರಮುಖವಾದ ಕೃತಿಗಳು.

#### 1.5.1 ವಿಕ್ರಮಾಂಕದೇವ ಚರಿತೆ

ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಆಸ್ಥಾನ ಕವಿಯಾದ ಬಿಲ್ಹಣನು ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾನೆ. ಇದನ್ನು 1998 ರಲ್ಲಿ ಶ್ರೀ ನಿಪ್ರಾಜಿ ಭೀಮಭಟ್ಟರು ಕನ್ನಡಕ್ಕೆ ಅನುವಾದಿಸಿದ್ದಾರೆ. 18 ಸರ್ಗಗಳಲ್ಲಿರುವ ಈ ಕೃತಿಯು ಆರನೆಯ ವಿಕ್ರಮಾದಿತ್ಯನ ಜೀವನ ಮತ್ತು ಸಾಧನೆಗಳ ಪರಿಚಯವನ್ನು ಮಾಡಿಕೊಡುತ್ತದೆ. ಮೂರನೆಯ ಅಧ್ಯಾಯದಲ್ಲಿ ವಿಕ್ರಮಾದಿತ್ಯನ ಜನನ ಹಾಗೂ ಬಾಲ್ಯವನ್ನು ವಿವರಿಸಿದರೆ, ಎಂಟು, ಒಂಭತ್ತು ಹಾಗೂ ಹತ್ತನೆಯ ಅಧ್ಯಾಯಗಳಲ್ಲಿ ವಿಕ್ರಮಾದಿತ್ಯ ಚಂದ್ರಲೇಖೆಯ ವಿವಾಹವನ್ನು ಹೇಳುವಾಗ ವಿವಾಹ ಪದ್ಧತಿ, ಅದು ಎಷ್ಟು ದಿನಗಳವರೆಗೆ ನಡೆಯುತ್ತದೆ. ಯಾವ ಯಾವ ದಿನಗಳಂದು ಏನೇನು ಮಾಡಬೇಕು ಎಂಬ ವಿಷಯದ ಬಗ್ಗೆ ಕವಿ ವಿಸ್ತಾರವಾಗಿ ವಿವೇಚಿಸಿದ್ದಾರೆ. ವಧುವಿನ ವೇಷ ಭೂಷಣಗಳ ವರ್ಣನೆಯು

ಅಲ್ಲಿದೆ ಮುಂದಿನ ಅಧ್ಯಾಯಗಳಲ್ಲಿ ಸ್ತ್ರೀಗೆ ಸಂಬಂಧಿಸಿದ ಅನೇಕ ವಿಷಯಗಳು ಅಲ್ಲಿವೆ. ಹೀಗಾಗಿ ಸ್ತ್ರೀಯರ ಸ್ಥಾನಮಾನವನ್ನು ತಿಳಿಯಲು ಇದೊಂದು ಪ್ರಮುಖವಾದ ಕೃತಿಯಾಗಿದೆ.

**1.5.2 ಮಾನಸೋಲ್ಲಾಸ**

ಕಲ್ಯಾಣ ಚಾಲುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರನಿಂದ ರಚಿಸಲ್ಪಟ್ಟ ಈ ಕೃತಿಯನ್ನು 1998ರಲ್ಲಿ ಡಾ.ಎಂ.ಎಂ.ಕಲ್ಬುರ್ಗಿಯವರ ಪ್ರಧಾನ ಸಂಪಾದಕತ್ವದಲ್ಲಿ ಕನ್ನಡಕ್ಕೆ ಅನುವಾದಿಸಲಾಗಿದೆ. ಮುನ್ನುಡಿಯಲ್ಲಿ ಸಂಪಾದಕರು ಹೇಳಿರುವಂತೆ "ಮಾನಸೋಲ್ಲಾಸವು ಪ್ರಾಚೀನ ಕರ್ನಾಟಕದ ಒಂದು ವಿಶ್ವಕೋಶ. ಈ ಕೃತಿಯನ್ನು ರಚಿಸಿದವನು 12ನೆಯ ಶತಮಾನದ ಕಲ್ಯಾಣ ಚಾಲುಕ್ಯ ಚಕ್ರವರ್ತಿ ಸರ್ವಜ್ಞ ಸೋಮೇಶ್ವರ ಸಂಸ್ಕೃತ ಭಾಷೆಯು ಇದರ ಮೂಲ. ಈ ಗ್ರಂಥದಲ್ಲಿ 5 ವಿಶಂತಿ ಇದ್ದು ಪ್ರತಿಯೊಂದು ವಿಶಂತಿಯಲ್ಲಿ 20 ಅಧ್ಯಾಯಗಳು, ಒಟ್ಟು 100 ಅಧ್ಯಾಯಗಳಲ್ಲಿ 8000 ಶ್ಲೋಕಗಳು ಇವೆ. ಇವುಗಳು ಆಗಿನ ಕರ್ನಾಟಕದ ರಾಜನೀತಿ, ವೈದ್ಯಶಾಸ್ತ್ರ, ಕಲೆ ಮತ್ತು ವಾಸ್ತುಶಿಲ್ಪ, ವಿಗ್ರಹ, ರಾಜಭೋಗ, ವಿನೋದ ವಾದ್ಯ, ನೃತ್ಯ ಕಥಾ ಚಮತ್ಕಾರ, ಕ್ರೀಡೆ, ವೇಷ ಭೂಷಣಗಳೂ, ಪಾನೀಯಗಳು ಮೊದಲಾದ ವಿಷಯಗಳ ಮೇಲೆ ಬೆಳಕನ್ನು ಚೆಲ್ಲುವ ಅದರಲ್ಲೂ, ಸ್ತ್ರೀಯರ ಆಭರಣ ಅವರ ವೇಷಭೂಷಣಗಳ ಬಗ್ಗೆ ವಿವರವಾಗಿ ಹೇಳಲಾಗಿದೆ.

ಪುತ್ರಭೋಗ ಪ್ರಕರಣ ಅನೇಕ ಅಮೂಲ್ಯ ವಿಷಯಗಳನ್ನು ತುಂಬಿಕೊಂಡಿದೆ. ಹೆಣ್ಣು ಗರ್ಭ ಧರಿಸಿದ ಮೂರನೆಯ ತಿಂಗಳು ಪುಂಸವನ ಕಾರ್ಯವನ್ನು ಆಚರಿಸಬೇಕು. ಆಗ ಎರಡು ಉದ್ದಿನ ಬೇಳೆಗಳನ್ನು ಒಳಗೊಂಡ ತುಪ್ಪದಲ್ಲಿ ತಯಾರಿಸಿದ ಜವೆಗೋಧಿಯ ಆಹಾರವನ್ನು ವೇದ ಮಂತ್ರ ಉಚ್ಛರಿಸುತ್ತಾ ಅರಸನ ಪತ್ನಿಗೆ ತಿನಿಸಬೇಕು. ಮುಂದೆ ಅವಳಿಗೆ ಪುತ್ರೋತ್ಸವದವರೆಗಿನ ಎಲ್ಲಾ ವಿಧಿ ವಿಧಾನಗಳನ್ನು ವಿವರಿಸಲಾಗಿದೆ. ಸ್ತ್ರೀಭೋಗ ಎಂಬ ಪ್ರಕರಣದಲ್ಲಿ ವಿವಿಧ ಪ್ರಕಾರದ ಸ್ತ್ರೀಯರ ವಿವರಗಳಿವೆ. ಹೀಗೆ ಮಹಿಳೆಯ ಅಧ್ಯಯನಕ್ಕೆ ಇದೊಂದು ಉಪಯುಕ್ತವಾದ ಕೃತಿಯಾಗಿದೆ.

**1.5.3 ಲೋಕೋಪಕಾರಂ**

ಕಲ್ಯಾಣದ ಚಾಲುಕ್ಯ ಚಕ್ರವರ್ತಿ ಎರಡನೆ ಜಯಸಿಂಹನ ಆಸ್ಥಾನ ಕವಿಯಾಗಿದ್ದ ಎರಡನೆಯ ಚಾವುಂಡರಾಯನಿಂದ ಕ್ರಿ.ಶ. 1025 ರಲ್ಲಿ ರಚಿತವಾದ ಈ ಕೃತಿಯು ಜನಸಾಮಾನ್ಯರಿಗೂ,

ಕೃಷಿಕರಿಗೂ, ವೈದ್ಯರಿಗೂ, ಜ್ಯೋತಿಷಿಗಳಿಗೂ, ಶಿಲ್ಪಿಗಳಿಗೂ, ಜನವಿಜ್ಞಾನಿಗಳಿಗೂ, ವಾಣಿಜ್ಯೋದ್ಯಮಿಗಳಿಗೂ ಪಾಕ ಕಲೆಗಾರರಿಗೂ ಅತ್ಯುಪಯುಕ್ತವಾಗಿರುವುದರಿಂದ ಸರ್ವಕಾಲಿಕ ಸರ್ವಾಧಾರಣೀಯವಾಗಿದೆ. ಅಂತೆಯೇ ಗೃಹ ಜೀವನದ ಕೈಪಿಡಿ "ಪುಟ್ಟ ವಿಶ್ವಕೋಶ" ಗೃಹವಿಜ್ಞಾನದ ಕೈಪಿಡಿ ಗೃಹ ವೈಧ್ಯಕಾ ಕಂಡಕ ಎಂದು ವಿದ್ವಾಂಸರಿಂದ ಮೆಚ್ಚುಗೆಯನ್ನು ಪಡೆದಿದೆ. ಶ್ರೀ ಎಚ್.ಶೇಷಯ್ಯಂಗಾರ್ ರವರಿಗೆ 1950ರಲ್ಲಿ ಸಂಪಾದಿತವಾದ ಈ ಕೃತಿಯು 938 ಪದ್ಯಗಳನ್ನು ಒಳಗೊಂಡಿದ್ದು ಅದರಲ್ಲಿ 628 ಕಂದಪದ್ಯಗಳಿರುವವು. ಪೀಠಿಕೆಯ ಪದ್ಯಗಳನ್ನು ಹೊರತುಪಡಿಸಿ ಮಿಕ್ಕಪದ್ಯಗಳಿಗೆ ಟೀಕೆಯಿದೆ.

ಪಂಚಾಂಗ ಫಲವರ್ಣನಂ, ನವಪಟಲ, ವಾಸ್ತು ಪ್ರಕರಣ, ಉತ್ಪತಾಧ್ಯಾಯ ಉದಕಾರ್ಗಳಂ, ವೃಕ್ಷಾಯುರ್ವೇದ, ಗಂಧಯುಕ್ತಿ ಕ್ರಮ, ಸೂಪಶಾಸ್ತ್ರಂ, ನರವೈದ್ಯಾಧಿಕಾರರ, ವಿಷವೈದ್ಯ, ಸರ್ವಲಕ್ಷಣಪರಿಜ್ಞಾನ ಪ್ರಕರಣಂ, ಶಕುನಾದಿ ಪ್ರಕರಣಂ ಎಂದು 12 ಅಧ್ಯಾಯಗಳು ಇವೆ. ಇದರಲ್ಲಿ ಹನ್ನೊಂದನೆಯ ಅಧ್ಯಾಯದಲ್ಲಿ ಸ್ತ್ರೀಯ ಅಂಗಾಂಗ ಲಕ್ಷಣಗಳನ್ನು ವಿವೇಚಿಸಲಾಗಿದೆ. ಅದರಲ್ಲೂ ಉತ್ತಮ ಕನ್ಯೆ, ಭಾಗ್ಯಹೀನೆ, ಜಾರೆ, ಪಾಪಿಷ್ಠೆ, ಅಮಂಗಳೆ, ವಿಧವೆ, ತಾಟಕೆ, ದುಃಖಿತ, ಅತಿಕಷ್ಟೇ, ಚರಿತ್ರ ಹೀನೆ, ಯೋಗಿನಿ ಆಗುವ ಚಿಹ್ನೆಗಳನ್ನು ಹೇಳಿರುವನು. ಹೀಗಾಗಿ ಇದು ಸಹ ನಮ್ಮ ಅಧ್ಯಯನಕ್ಕೆ ಉಪಯುಕ್ತವಾದ ಮಾಹಿತಿಯನ್ನು ನೀಡುವ ಕೃತಿಯಾಗಿದೆ.

### 1.5.4 ನಯಸೇನನ ಧರ್ಮಾಮೃತ

ಕ್ರಿ.ಶ. 1113ರಲ್ಲಿ ರಚಿತವಾದ 'ಧರ್ಮಾಮೃತ'ವು 14 ಕಥೆಗಳ ಹಂದರವನ್ನು ಹೊಂದಿದೆ. ಇಂದಿನ ಗದಗ ಜಿಲ್ಲೆಯ ಮುಳಗುಂದದವನಾದ ನಯಸೇನನು ತನ್ನ ಈ ಕಥೆಗಳಲ್ಲಿ ಅಂದಿನ ಜನಜೀವನದ ಚಿತ್ರವನ್ನು ಬಿಡಿಸಿ ಇಟ್ಟಿದ್ದಾನೆ. ಅವನಲ್ಲಿದ್ದ ಸಾಮಾಜಿಕ ಪ್ರಜ್ಞೆ ಬೆರಗುಗೊಳಿಸುವಂತಹದು. ಸಮಕಾಲೀನ ಜೀವನದೊಡನೆ ಬೆರೆತು ಅದರ ಸಂಪರ್ಕವನ್ನು ಕಡಿದುಕೊಳ್ಳದೆ ಬೆಳೆಸಿಕೊಂಡು ಬಂದಿರುವ ಕನ್ನಡದ ಕೆಲವೇ ಜನ ಕವಿಗಳಲ್ಲಿ ಮಾತ್ರ ಕಾಣಬಹುದು. ನಯಸೇನನ ಕಾಲದ ಸಾಮಾಜಿಕ ಅಧ್ಯಯನಕ್ಕೆ ಅವನ ಕೃತಿ ಅಮೂಲ್ಯ ಸಾಮಾಗ್ರಿಗಳನ್ನೊದಗಿಸುತ್ತದೆ. ಒಂದು ಕಾಲದ ಜನಜೀವನ ಇಷ್ಟರ ಮಟ್ಟಿಗೆ ಒಂದು ಕೃತಿಯಲ್ಲಿ ಅಭಿವ್ಯಕ್ತಗೊಂಡಿರುವುದು ಕನ್ನಡದಲ್ಲಿ ಅತ್ಯಪೂರ್ವ.[2]

"ನಯಸೇನ ಮೊದಲು ಸಂಸಾರಿಯಾಗಿದ್ದು ಆಮೇಲೆ ಮುನಿಯಾಗಿರಬೇಕು. ಅವನ ಸಾಂಸಾರಿಕ ಜೀವನ ಅವನಿಗೆ ಅನೇಕ ಬಗೆಯ ಅನುಭವಗಳನ್ನು ಒದಗಿಸಿದೆ. ತನ್ನ ಜೊತೆಗೆ ನೇರವಾಗಿ ಸಂಪರ್ಕ ಬಂದ ವಿವಿಧ ಬಗೆಯ ವೃತ್ತಿ ಪ್ರವೃತ್ತಿಗಳ ಜನರನ್ನು ಅವನು ಬಹಳ ಆಳವಾಗಿ ಅಭ್ಯಾಸಿಸಿದ್ದಾನೆ. ಅವನ ದೃಷ್ಟಿ ಬಹಳ ತೀಕ್ಷ್ಣ ಅಷ್ಟೇ ಸೂಕ್ಷ್ಮ. ತನ್ನ ಸುತ್ತಮುತ್ತಲಿನ ಜನಜೀವನದ ಬಗೆಗೆ ಅವನಿಗೆ ಅಪಾರ ಆಸಕ್ತಿ. ವ್ಯಕ್ತಿಗಳು ಚಿಕ್ಕವರಿರಲಿ, ಬಡವರಿರಲಿ, ಶ್ರೀಮಂತರಿರಲಿ, ರಾಜನಿರಲಿ, ರಸಿಕನಿರಲಿ ಎಲ್ಲರ ಶೀಲಸ್ವಭಾವಗಳನ್ನು ನಯಸೇನ ಬಹಳ ಸೂಕ್ಷ್ಮವಾಗಿ ಅವಲೋಕಿಸಿದ್ದಾನೆ. ಪಶುಪಕ್ಷಿ ಕ್ರಿಮಿಕೀಟಗಳ ಚಟುವಟಿಕೆ, ಅವುಗಳ ಸ್ವಭಾವಾದಿಗಳು ಕೂಡ ಅವನ ಅಭ್ಯಾಸ ವ್ಯಾಪ್ತಿಗೊಳಪಟ್ಟಿವೆ. ಆದುದರಿಂದ ಅವನ ಲೋಕಾನುಭವ ಅಪಾರ ಮತ್ತು ವೈವಿಧ್ಯಮಯ.[3]

ಧರ್ಮಾಮೃತದ ಹಲವಾರು ಕಥೆಗಳಲ್ಲಿ ಅಂದಿನ ಸಾಂಸಾರಿಕ ಚಿತ್ರಣ ಬಹು ಸುಂದರವಾಗಿ ಮೂಡಿಬಂದಿದೆ. ಅವನ ಸ್ತ್ರೀಯರ ಚಿತ್ರಣವನ್ನು ನೀಡುತ್ತಾ ಅಂದು ಎಲ್ಲ ಸಂಸಾರಗಳೂ ಸುಖಮಯವಾಗಿರಲಿಲ್ಲ. ಜಗಳಗಂಟಿ ಹೆಂಡತಿಯಿಂದಾಗಿ ಮಿಡಿಮಿಡು ಮಿಡುವ, ಒಲ್ಲದ ಹೆಂಡತಿ ಗಂಟು ಬಿದ್ದು ಒಂದೇ ಸಮನೆ ಬಿಸುಸುಯ್ಯನ, ಇಬ್ಬರು ಮೂವರನ್ನು ಮದುವೆಯಾಗಿ ಪರಸ್ಪರ ಪುರಡಿಸುವ ಸವತಿಯರ ಮಧ್ಯ ಸಿಕ್ಕು ಗೋಳಾಡುವ ದುರ್ದೈವಿ ಗಂಡಂದಿರೂ ಇದ್ದರು (1–168) ಮದುವೆ, ಬಾಲ್ಯವಿವಾಹ ಸೂಳೆಯರ ವಿಷಯವಾಗಿ ಹಲವಾರು ಕಥೆಗಳಲ್ಲಿ ಚಿತ್ರಿಸಿರುವುದರಿಂದ ಮಹಿಳೆಯರ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಇದೊಂದು ಉಪಯುಕ್ತವಾದ ಕೃತಿಯಾಗಿದೆ.

**1.5.5 ಬ್ರಹ್ಮಶಿವ ರಚಿತ ಸಮಯ ಪರೀಕ್ಷೆ**

ಕ್ರಿ.ಶ. 1100 ರಲ್ಲಿ ಬದುಕಿದ್ದ ಬ್ರಹ್ಮಶಿವನು 'ಸಮಯ ಪರೀಕ್ಷೆ' ಎಂಬ ಕಾವ್ಯವನ್ನು ಬರೆದನು. 15 ಅಧಿಕಾರಗಳು (ಅಧ್ಯಾಯಗಳು) ಇರುವ ಈ ಕೃತಿಯು ಆ ಕಾಲದ ಸಾಮಾಜಿಕ, ಧಾರ್ಮಿಕ ಅಧ್ಯಯನ ಮಾಡುವವರಿಗೆ ಚಿನ್ನದ ಗಣಿಯಾಗಿದೆ. ಅಂದಿನ ಸಮಾಜದಲ್ಲಿ ಧಾರ್ಮಿಕ ಸಹಿ ಭಾವವನ್ನು "ಹೆಂಡತಿ ಮಾಹೇಶ್ವರಿಗಡ ಗಂಡಂ ಜೈನಂಗಡವನ ಮಕ್ಕಳ್ಗಡ ಮಾರ್ತ್ತಂಡಂಗೆ ಭಕ್ತರೆನಿಪಾ ಭಂಡಂಗುತ್ತಮದ ಜೈನವೆಸರೆಂತೆಸಗುಂ" ಎಂಬ ಈ ಪದ್ಯದಿಂದ ಸ್ಪಷ್ಟವಾಗುತ್ತದೆ.

ಅಂದಿನ ಮಹಿಳೆಯರನ್ನು ಕುರಿತು ಬ್ರಹ್ಮ ಶಿವನು "ನೆದಮನೆಯವರೆನ್ನಂ ಜಾತ್ರೆಗೆ ಕರೆದೊಡೆ ಬರಲೀಯನೆನ್ನ ಗಂಡಂ ಪೋಲಿಯಂ, ಕರಮುಖ್ಯಡೆಯಾಂತಂ ಎಂದು ಹೇಳುವ, ಕೂಸಿಂಗೆ ಕುತ್ತವಾದಡೆ ದೇಶದ ಬಳರಿಯರ್ಗ್ಗೆ" ಬಳರ್ಚನೆ ಕೊಡುವ, ಮಕ್ಕಳ ವ್ಯಾಸನಗಳಿಗೆ ಪ್ರೋತ್ಸಾಹಧನ ಕೊಡುವ ಆದರೆ ಧರ್ಮಕಾರ್ಯದಲ್ಲಿ ಅನಾಸಕ್ತಿ ತೋರಿಸುವ ಹಾಗೂ ಇನ್ನೂ ಅನೇಕ ಸ್ವೇಚ್ಛಾಚಾರದಲ್ಲಿ ತೊಡಗಿರುವ 'ಅವಿಗುರಿವೆಂಡಿ'ರ ವಿಷಯವನ್ನು ಲಕ್ಷಿಸಿದಾಗ ಈ ಸಂಕ್ರಮಣ ಕಾಲದಲ್ಲಿ ಸ್ತ್ರೀಯರೂ ಕೂಡ ಯಾವ ಮಟ್ಟಕ್ಕೆ ಇಳಿದಿದ್ದರೆಂಬ ಅಂಶವು ತಿಳಿಯುತ್ತದೆ.[4]

**1.5.6 ಪಂಪಭಾರತ**

ಕ್ರಿ.ಶ. 902 ರಲ್ಲಿ ಜನಿಸಿದ ಪಂಪ ವೇಮಲವಾಡ ಚಾಲುಕ್ಯ ಅರಸ ಅರಕೇಸರಿಯ ಆಸ್ಥಾನದಲ್ಲಿ ಇದ್ದಂತವನು. 'ಆದಿಪುರಾಣ' ಹಾಗೂ 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪಭಾರತ' ಎಂಬ ಕೃತಿಗಳನ್ನು ರಚಿಸಿದನು. ಪಂಪ ಭಾರತದಲ್ಲಿ ಬರುವ ಕೆಲವು ಸ್ತ್ರೀಪಾತ್ರಗಳೆಂದರೆ ದ್ರೌಪತಿ, ಕುಂತಿ, ಮಾದ್ರಿ, ಗಾಂಧಾರಿ, ಭಾನುಮತಿ, ಸತ್ಯವತಿ, ಅಂಬಿಕೆ, ಅಂಬಲೆ ಮೊದಲಾದವರು. ಇಲ್ಲಿ ದ್ರೌಪದಿ ಯನ್ನುಳಿದು ಬೇರೆ ಯಾವ ಪಾತ್ರದಲ್ಲಿಯೂ ವಿಶೇಷ ಕಳೆ ಕಂಡುಬರುವುದಿಲ್ಲ. ಇವರಲ್ಲದೆ ಪಂಪ ಭಾರತದಲ್ಲಿ ತೆರೆಯ ಮೇಲೆ ಕಾಣಿಸಿಕೊಳ್ಳುವ ಇತರ ಸ್ತ್ರೀಪಾತ್ರಗಳೆಂದರೆ ಆಸ್ಥಾನದ ಪರಿಚಾರಿಕೆ ಯರು, ಯೋಧರ ಹೆಂಡಂದಿರು, ಪಾರಾಂಗನೆಯರು, ಮಾಟಗಾರ್ತಿಯರು ಮುಂತಾದವರು. ಮಹಾಭಾರತದಲ್ಲಿ ದ್ರೌಪದಿಯು ಐವರ ಪತ್ನಿಯಾದರೆ ಪಂಪ ಭಾರತದಲ್ಲಿ ಅಂದಿನ ಸಮಾಜದತ್ತ ರೂಢಿಗೆ ವಿರುದ್ಧವಾಗದ ರೀತಿಯಲ್ಲಿ ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿರುವುದರಲ್ಲಿ ಆ ರೂಢಿಯ ಪೊರೆಯನ್ನು ಕಳಚಿ ದ್ರೌಪದಿಯನ್ನು ಅರ್ಜುನ ನೊಬ್ಬನಿಗೆ ಸತಿಯನ್ನಾಗಿಸಿದ್ದಾನೆ. ಅಲ್ಲದೇ ಪಂಪ ತನ್ನ ಕೃತಿಯಲ್ಲಿ ಬರುವ ಸ್ತ್ರೀ ಪಾತ್ರಗಳಲ್ಲಿಯೂ ಸೂಚಿ, ಪತಿವ್ರತಾ, ಶೀಲ, ಸಾತ್ವಿಕತೆ ಮೊದಲಾದವುಗಳನ್ನು ಒತ್ತುಕೊಟ್ಟು ಹೇಳಿದಂತೆ ಕಂಡು ಬರುವುದಿಲ್ಲ. ಸ್ತ್ರೀಯರನ್ನು ಶೃಂಗಾರ ದೃಷ್ಟಿಯಿಂದ ಅತಿಯಾಗಿ ವರ್ಣಿಸುವುದು. ವೈಶ್ಯೆಯರ ವಿವರವಾದ ಚಿತ್ರಣವನ್ನು ನೀಡುವುದು ಮಾಡಿದ್ದಾನೆ. ಸ್ತ್ರೀಯನ್ನು ಜನರು ಅಂದು ಹಲವು ರೀತಿಯ ಭೋಗವಸ್ತುವನ್ನಾಗಿ ಬಳಸಿದುದರ ಸಂಜ್ಞೆಯೂ ಪಂಪಭಾರತದಲ್ಲಿದೆ. ತಮ್ಮ ಪತಿ ತೀರಿದಾಗ ಸಹಗಮನಕ್ಕೆ ನಾ ಮುಂದೇ ತಾ ಮುಂದೆ ಎಂದು ತವಕಿಸುತ್ತಿರುವ ಮಾದ್ರಿ ಕುಂತಿಯಲ್ಲಿ ಪಂಪನ ಕಾಲದಲ್ಲಿ ಪ್ರಚಲಿತದಲ್ಲಿದ್ದ 'ಮಹಾಸತಿ' ಸಂಪ್ರದಾಯದ ಇಣುಕು ನೋಟವಿದೆ. ಅಂದಿನ ಸ್ತ್ರೀಯರು ಉಪಯೋಗಿಸುತ್ತಿದ್ದ ಉಡುಪಿನ, ಆಭರಣಗಳ ಬಗ್ಗೆ ವಿವರಣೆ ಇದೆ.

### 1.5.7 ರನ್ನನ ಗದಾಯುದ್ಧ

ಕ್ರಿ.ಶ. 949ರಲ್ಲಿ ಮುದುವೊಳಲಲ್ಲಿ ಜನಿಸಿದ ರನ್ನನು ಅಜಿತಸೇನಾಚಾರ್ಯರ ಕೀರ್ತಿಯನ್ನು ಕೇಳಿ ಅವರಲ್ಲಿ ತಾನು ವಿದ್ಯಾಭ್ಯಾಸ ಮಾಡಬೇಕೆಂದು ಸಂಕಲ್ಪಿಸಿ, ಕ್ರಿ.ಶ. 981ರಲ್ಲಿ ಚಾವುಂಡರಾಯನ ಆಸ್ಥಾನಕ್ಕೆ ಹೋದನು. ಅಲ್ಲಿ ಅವನಿಗೆ ಚಾವುಂಡರಾಯನ ಆಶ್ರಯ ಸಿಕ್ಕಿತು. ಕ್ರಿ.ಶ. 981ರಲ್ಲಿ ನಡೆದ ಗೋಮ್ಮಟೇಶ್ವರ ಪ್ರತಿಮೆಯನ್ನು ಕಣ್ಣಾರೆ ಕಂಡಿರಬೇಕು. ಶ್ರವಣಬೆಳಗೊಳದಲ್ಲಿ ಬಂಡೆಯ ಮೇಲೆ 'ಶ್ರೀ ಕವಿರತ್ನ' ಎಂಬ ಹಿಂಬರವಿದೆ. ತನ್ನ ವಿದ್ಯಾಭ್ಯಾಸವನ್ನು ಮುಗಿಸಿ, ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯವನ್ನು ಪಡೆದ ಮೇಲೆ ಅವನು ಕರ್ನಾಟಕದ ಸಕಲ ಚಕ್ರವರ್ತಿ, ಪಡುವಣ ಚಾಳುಕ್ಯ ಅಹವಮಲ್ಲ ತೈಲಪನ ಆಸ್ಥಾನವನ್ನು ಸೇರಿ ಅವನಿಂದ 'ಕವಿಚಕ್ರವರ್ತಿ' ಬಿರುದನ್ನು ಛತ್ರಗಾವೆ ಜಹಗೀರನ್ನು ಪಡೆದನು. ಇವನು ಅತ್ತಿಮಬ್ಬೆಗಾಗಿ 'ಅಜಿತನಾಥಪುರಾಣ'ವನ್ನು ಕ್ರಿ.ಶ. 993ರಲ್ಲಿ ರಚಿಸಿದನು. ಅವನ ಇನ್ನೊಂದ ಮಹಾನ್ ಕೃತಿ 'ಗದಾಯುದ್ಧ'. ಇದೊಂದು ಚಂಪೂಕಾವ್ಯ. ಇದರಲ್ಲಿ ಹತ್ತು ಆಶ್ವಾಸಗಳಿವೆ. ಇದರಲ್ಲಿ ಪಾಂಡವ ಭೀಮನ ಹೆಸರನ್ನು ಹೇಳುವ ಪ್ರಸಂಗಗಳಲ್ಲಿ ಅನೇಕ ಕಡೆ 'ಇರಿವಬೆಡಂಗ ಸತ್ಯಾಶ್ರಯ' ಹೆಸರು ಬರುತ್ತದೆ. ರನ್ನನು ತನ್ನ ಗದಾಯುದ್ಧವನ್ನು ರಚಿಸಿ ಪಾಂಡವ ಭೀಮನಿಗೆ ಇರಿವ ಬೆಡಂಗನನ್ನು ಹೋಲಿಸಿ, ಅದನ್ನು 'ಸಾಹಸಭೀಮವಿಜಯ' ಎಂದು ಕರೆದನು. ಇರಿವ ಬೆಡಂಗನ ವಿಜಯವನ್ನು ಕಾವ್ಯದಲ್ಲಿ ಹೀಗೆ ವರ್ಣಿಸಿದ್ದಾನೆ.

ಜಲಧಿಯ ಸತ್ಯಾಶ್ರಯ ಬಲ
ಜಲಧಿಯ ನಡುವಳುವನ ತೋಪಶಿಖಿಗಳ
ರ್ತಲೆವೊತ್ತಿದ ಪುಳ್ಳಿಯ ಪ್ರೇಮಿ ನಡುವಿ
ವೊಲಿದನನತಿ ಚಕಿತ ಚಿತ್ತನ ಪರಾದಿತ್ಯಂ

### 1.5.8 ವಿಜ್ಞಾನೇಶ್ವರನ ಮಿತಾಕ್ಷರ

ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಆಸ್ಥಾನದಲ್ಲಿಯೇ ರಚಿತವಾದ ಈ ಕೃತಿಯು ಯಜ್ಞವಲ್ಕನ ಸ್ಮೃತಿಗೆ ಬರೆದ ವ್ಯಾಖ್ಯಾನವೇ ಆಗಿದೆ. ಆದರೂ ಇದು ವ್ಯಾಖ್ಯಾನ ಮಾತ್ರವಲ್ಲ. ಅದಕ್ಕಿಂತಲೂ ಹೆಚ್ಚಾದುದು ಹೌದು! ಇದು ಎಲ್ಲ ಪ್ರಾಚೀನ ಸ್ಮೃತಿಗಳ ಸಂಗ್ರಹದಂತೆ ಇದೆ. ಮಿತಾಕ್ಷರವು ಧರ್ಮಶಾಸ್ತ್ರ ಸಾಹಿತ್ಯದಲ್ಲಿ ವಿಶೇಷ ಸ್ಥಾನವನ್ನು ಪಡೆದಿದೆ. ಇದು ಅನೇಕ ವ್ಯಾಖ್ಯಾನಗಳು ಮತ್ತು ವಿವರಣೆಗಳೆಂಬ ಹೊರ ಪ್ರವಾಹಕ್ಕೆ ಮೂಲವಾದ ಚಿಲುಮೆಯಾಯಿತು.

ದತ್ತು ತೆಗೆದುಕೊಳ್ಳುವುದು, ಸ್ವತ್ತು, ಆಸ್ತಿ ವಿಭಾವ ಮುಂತಾದ ಹಿಂದೂ ನ್ಯಾಯಾಂಗಗಳ ವಿಷಯದಲ್ಲಿ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿದ್ದ ಭಾರತದಲ್ಲಿ ಯಾವುದೇ ತೀರ್ಮಾನ ಕೈಗೊಳ್ಳ ಬೇಕಾದರೂ ಮಿತಾಕ್ಷರವು ಅತ್ಯುತ್ತಮ ಆಧಾರವಾಗಿದ್ದಿತು ಎಂಬ ಡಾ.ಪಿ.ವಿ.ಕಾಣೆಯವರ ಮಾತು ಯುಕ್ತವೇ ಆಗಿದೆ.

ಕಾಯಿದೆಗೆ ಸಂಬಂಧಪಟ್ಟ ವಿಷಯಗಳಲ್ಲಿ ಲೇಖಕನು ಅನುಸ್ಯೂತವಾದ ಮತ್ತು ನಿಖರವಾದ ಶೈಲಿಯಲ್ಲಿ ಅನುಸರಿಸುವ ಕ್ರಮಬದ್ಧವಾದ ರೀತಿಯನ್ನು ನೀತಿಶಾಸ್ತ್ರದಲ್ಲಿ ಅವನಿಗಿರುವ ವಿಸ್ತಾರವಾದ ಪಾಂಡಿತ್ಯವನ್ನು ತರ್ಕಬದ್ಧವಾದ ಅವನ ತೀಕ್ಷ್ಣಬುದ್ಧಿಯನ್ನು ನೋಡಿದಾಗ, ಮುಂದಿನ ಶತಮಾನಗಳಲ್ಲಿ ಇದಕ್ಕೆ ಕೊಟ್ಟ ಪ್ರಾಮಾಣ್ಯವನ್ನು ನೋಡಿ ಯಾರು ಅಚ್ಚರಿ ಪಡಬೇಕಾಗಿಲ್ಲ.[5]

ವಚನ ಸಾಹಿತ್ಯವು ವಿಶಿಷ್ಟವಾಗಿರುವುದಲ್ಲದೆ, ಅದು ಮೂಡಿಬಂದ ಕಾಲವೂ ಕನ್ನಡನಾಡಿನ ಇತಿಹಾಸದಲ್ಲಿ ವಿಶಿಷ್ಟವೆನಿಸುವ ಕಾಲ. ವೀರಶೈವ ಧರ್ಮವಾಗಲೀ, ಶರಣರ ಸಾಮಾಜಿಕ ದರ್ಶನವಾಗಲೀ ಆ ಕಾಲದ ರೂಢ ಮೂಲವಾಗಿ ನಿಂತ ನೀರಾಗಿದ್ದ ಸಂಪ್ರದಾಯ, ಸಂಸ್ಥೆಗಳ ವಿರುದ್ಧ ಸಿಡಿದೆದ್ದು ಕ್ರಾಂತಿಕಾರಕವೆನಿಸಿಕೊಳ್ಳುವ ಚಳುವಳಿಯೊಂದನ್ನೇ ಜನರಿಂದ ನಡೆಯಿಸಿತು. ಇವುಗಳು ಪ್ರಚಾರಗೊಂಡದ್ದು, ಜನಪ್ರಿಯವಾದದ್ದು ವಚನಗಳ ಮೂಲಕವಾಗಿ ಆದ್ದರಿಂದ ಆಗಿನ ಜೀವನದ ಬಗ್ಗೆ ವಚನಕಾರರು ಮಾತನಾಡುವುದರಿಂದ ಆ ಕಾಲದ ಜೀವನದ ರೀತಿಯು ವ್ಯಕ್ತ ವಾಗುವುದಲ್ಲದೆ ಅದರ ಬಗ್ಗೆ ವಚನಕಾರರ ಮನೋಭಾವವೂ ಗೋಚರಿಸುತ್ತದೆ.[6] ಹೀಗೆ 12ನೇ ಶತಮಾನದಲ್ಲಿ ಆಗಿಹೋದ ಹಲವಾರು ವಚನಕಾರರ ವಚನಗಳು ಅಂದಿನ ಸಾಮಾಜಿಕ ಸ್ಥಿತಿಯನ್ನು ತೀಕ್ಷ್ಣವಾಗಿ ನೋಡಿದ್ದಾರೆ. ಇಲ್ಲಿ ಪ್ರಮುಖವಾಗಿ ಅಕ್ಕಮಹಾದೇವಿ, ಅಲ್ಲಮಪ್ರಭು, ಚನ್ನಬಸವಣ್ಣ, ಮತ್ತು ಬಸವಣ್ಣನವರ ವಚನಗಳನ್ನು ಅವಲೋಕಿಸಿದೆ. ಸ್ತ್ರೀಯರ ಬಗ್ಗೆ ಅವರ ನಿಲುವೇನು ಎಂಬುವುದನ್ನು ಸಂದರ್ಭಕ್ಕನುಸಾರವಾಗಿ ಉಪಯೋಗಿಸಿಕೊಳ್ಳಲಾಗಿದೆ.

**1.6 ಅಧ್ಯಯನದ ಕುರಿತು**

ಕಲ್ಯಾಣದ ಚಾಲುಕ್ಯರ ಕಾಲದ ಮಹಿಳೆಯರ ಸ್ಥಾನಮಾನವನ್ನು ಕುರಿತು ಅಧ್ಯಯನ ಮಾಡಲು ಶಾಸನಗಳು ಮೊದಲು ಪ್ರಮಾಣಭೂತ ಆಕರಗಳಾಗಿರುವುದರಿಂದ ಒಂದೊಂದು ಅಂಶಕ್ಕೆ ಸಂಬಂಧಿಸಿದ ವಿವಿಧ ವಿಷಯದ ಸಂಗ್ರಹಣೆಗೆ ಈಚೆಗೆ ತುಂಬ ಜನಪ್ರಿಯಗೊಳ್ಳುತ್ತಿರುವ ಪಟ್ಟಿಕೆ

ವಿಧಾನವನ್ನು ಅನುಸರಿಸಲಾಗಿದೆ. ಪ್ರತಿಪಟ್ಟಿಕೆ ಒಂದೊಂದು ವಿಷಯದೊಂದಿಗೆ ಶಾಸನ ದೊರೆತ ಸ್ಥಳ, ತಾಲ್ಲೂಕು, ಅರಸರ ಕಾಲ, ಅದು ಪ್ರಕಟವಾದ ಸಂಪುಟ ಮುಂತಾದ ವಿವರಗಳು ಇರುವಂತೆ ನೋಡಿಕೊಳ್ಳಲಾಗಿತ್ತು. ಪಟ್ಟಿಕೆಗಳ ಮರು ವಿಂಗಡನೆಗೆ ಸಹಾಯಕವಾಗುವಂತೆ ರಾಣಿಯರ ಪ್ರಶಸ್ತಿಗಳು ಮಹಾಸಾಮಂತರ ಮಡದಿಯರು ಸಾಮಾನ್ಯ ವರ್ಗದ ಮಹಿಳೆಯರು, ರಾಣಿಯರು ಆಡಳಿತ ಮಾಡುತ್ತಿರುವ ಆಡಳಿತ ವಿಭಾಗ, ಅವರು ಕಟ್ಟಿಸಿದ ದೇವಾಲಯಗಳು, ಮೂಡಿಸಿರುವ ವಿಗ್ರಹ, ದಾನ ಬಿಟ್ಟಿದ್ದು, ದಾನ ಪಡೆದವರು ಮುಂತಾದ ವಿವರಗಳನ್ನು ಪಟ್ಟಿಕೆಗಳು ಒಳಗೊಂಡಿದ್ದವು.

ಶಾಸನಗಳಲ್ಲಿ ಉಲ್ಲೇಖವಾಗಿರುವ ಮಹಿಳೆಯರಲ್ಲಿ ರಾಜಮನೆತನದ ಮಹಿಳೆ ಮತ್ತು ಉನ್ನತ ವರ್ಗದ ಮಹಿಳೆ, ಇವರಲ್ಲಿ ಪ್ರಭುವರ್ಗದ ರಾಣಿಯರಿಗೀಗ ಸಾಮಂತ, ಮಾಂಡಲಿಕ, ದಂಡನಾಯಕ, ನಾಳ್ಗಾವುಂಡ ಮತ್ತು ಗಾವುಂಡ ಮನೆತನದ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಪ್ರಭುವರ್ಗಕ್ಕೆ ಸೇರಿದ ಮಹಿಳೆಯರಿಗಿಂತ ಇವರ ಸಂಖ್ಯೆಯೇ ಅಧಿಕವಾಗಿದೆ. ಇದಕ್ಕೆ ರಾಜ ವರ್ಗದವರಿಗಿಂತ ಇವರ ಸಂಖ್ಯೆಯು ಅಧಿಕವಾಗಿರುವುದೇ ಕಾರಣವಾಗಿರುವಂತೆ ಮೇಲಿನ ಅಂತಸ್ತಿನವರಿಗಿಂತ ಕೆಳಗಿನ ಅಂತಸ್ತಿನವರು ಸಮಾಜದಲ್ಲಿ ಹೆಚ್ಚು ಕಾಣಿಸಿಕೊಳ್ಳುವುದೂ ಕಾರಣವಾಗಿರಬಹುದು.

ಈವರೆಗೆ ಪ್ರಕಟವಾಗಿರುವ ಕಲ್ಯಾಣದ ಚಾಲುಕ್ಯರ ಶಾಸನಗಳನ್ನು ಸಮಗ್ರವಾಗಿ ಅವಲೋಕಿಸಿ ಲಭ್ಯವಾದ ಎಲ್ಲಾ ಮಾಹಿತಿಯನ್ನು ಸಂಗ್ರಹಿಸಿಕೊಂಡು ಇದನ್ನೇ ಮೂಲ ಸಾಮಗ್ರಿ ಯನ್ನಾಗಿಟ್ಟುಕೊಂಡು ಆ ವಿಷಯ ಸಮರ್ಥನೆಗಾಗಿ, ಸ್ಪಷ್ಟನೆಗಾಗಿ ಸಮಕಾಲೀನ ಕಾವ್ಯ ಮತ್ತು ಇತರ ಗ್ರಂಥಗಳ ಆಕರಗಳನ್ನು ಬಳಸಿಕೊಂಡು ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**1.7 ಅಧ್ಯಯನಗಳ ವಿಭಾಗೀಕರಣ**

**ಅಧ್ಯಾಯ 1**

ಈ ಅಧ್ಯಾಯವು ಪೀಠಿಕೆ, ಈವರೆಗಿನ ಅಧ್ಯಯನಗಳು, ಅಧ್ಯಯನದ ಆಕರಗಳು, ಶಾಸನಗಳು, ಸ್ಮಾರಕಗಳು, ಸಾಹಿತ್ಯ, ಅಧ್ಯಯನದ ಕುರಿತು ಚರ್ಚಿಸಲಾಗಿದೆ ಮತ್ತು ಹಿನ್ನಲೆಯನ್ನು ವಿವರಿಸಲಾಗಿದೆ.

**ಅಧ್ಯಾಯ 2**

ಈ ಅಧ್ಯಾಯದಲ್ಲಿ ಮಹಿಳೆ ಮತ್ತು ಸಮಾಜದ ಬಗ್ಗೆ ವಿವರಿಸಲಾಗಿದೆ. ಶಿಕ್ಷಣ, ವಿವಿಧ ರೀತಿಗಳ ಮದುವೆ, ಮದುವೆಯ ಸಂಬಂಧಗಳು, ಸ್ತ್ರೀಧನ, ಬಹುಪತ್ನಿತ್ವ, ದಾಂಪತ್ಯ ಮತ್ತು ವೇಶ್ಯೆಯರ ಬಗ್ಗೆ ವಿವರಿಸಲಾಗಿದೆ.

**ಅಧ್ಯಾಯ 3**

ಈ ಅಧ್ಯಾಯದಲ್ಲಿ ಮಹಿಳೆ ಹಾಗೂ ಆರ್ಥಿಕತೆ ಮತ್ತು ಸಾರ್ವಜನಿಕ ಉಪಯೋಗಿ ಕಾರ್ಯಗಳ ಬಗ್ಗೆ ಚರ್ಚೆಯನ್ನು ಮಾಡಲಾಗಿದೆ. ಕೃಷಿ, ವ್ಯಾಪಾರ, ತೆರಿಗೆಗಳು, ಮಹಿಳೆಯರ ಉಡುಪುಗಳು, ಆಭರಣಗಳು, ಕೇಶಾಲಂಕಾರಗಳ ಬಗ್ಗೆ ವಿವರಣೆ ನೀಡಲಾಗಿದೆ.

**ಅಧ್ಯಾಯ 4**

ಈ ಅಧ್ಯಾಯದಲ್ಲಿ ಮಹಿಳೆ ಮತ್ತು ಆಡಳಿತದ ಬಗ್ಗೆ ವಿವರಿಸಲಾಗಿದೆ. ಮಹಾಮಂಡಳೇಶ್ವರಿಯರ ಹಾಗೂ ರಾಣಿಯರ ಆಡಳಿತದಲ್ಲಿ ಅವರ ಪಾತ್ರದ ಬಗ್ಗೆ ವಿವರಣೆ ನೀಡಲಾಗಿದೆ. ದಂಡನಾಯಕಿಯರಾಗಿ ಹಾಗೂ ನಾಳ್ಗಾವುಂಡರಾಗಿ ಅವರ ಪಾತ್ರವನ್ನು ವಿವರಿಸಲಾಗಿದೆ.

**ಅಧ್ಯಾಯ 5**

ಈ ಅಧ್ಯಾಯದಲ್ಲಿ ಮಹಿಳೆ ಮತ್ತು ಶಿಕ್ಷಣ ಹಾಗೂ ಸಾಹಿತ್ಯದ ಕೊಡುಗೆಗಳನ್ನು ವಿವರಿಸಲಾಗಿದೆ.

**ಅಧ್ಯಾಯ 6**

ಈ ಅಧ್ಯಾಯದಲ್ಲಿ ಮಹಿಳೆ ಮತ್ತು ಲಲಿತಕಲೆಗಳ ಬಗ್ಗೆ ವಿವರಣೆ ನೀಡಲಾಗಿದೆ.

**ಅಧ್ಯಾಯ 7**

ಈ ಅಧ್ಯಾಯದಲ್ಲಿ ಮಹಿಳೆ ಮತ್ತು ಧರ್ಮದ ಕೊಡುಗೆಗಳನ್ನು ವಿವರಿಸಲಾಗಿದೆ. ಭೌದ್ಧ ಧರ್ಮ, ಜೈನಧರ್ಮ, ವೈದಿಕ ಧರ್ಮ, ದೇವಾಲಯಗಳಿಗೆ ಜೀರ್ಣೋದ್ಧಾರಕ್ಕಾಗಿ ನೀಡಿದ ದಾನ ಹಾಗೂ ದೇವರ ನೈವೇದ್ಯಕ್ಕೆ ಹಾಗೂ ಇತರ ಸೇವೆಗೆ ನೀಡಿದ ದಾನಗಳನ್ನು ವಿವರಿಸಲಾಗಿದೆ.

**ಅಧ್ಯಾಯ 8**

ಈ ಅಧ್ಯಾಯದಲ್ಲಿ ಪ್ರಸ್ತುತ ಪ್ರಬಂಧದಿಂದ ಪಡೆದ ಪ್ರಮುಖ ಬೆಳಕನ್ನು ಚೆಲ್ಲುವ ವಿವರಗಳನ್ನು ನೀಡಲಾಗಿದೆ.

## ಅಡಿ ಟಿಪ್ಪಣಿಗಳು

1) ಚಿದಾನಂದಮೂರ್ತಿ ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು.27

2) ಅದೇ ಸಂಶೋಧನ ತರಂಗ-11, ಪು.99

3) ಮಲ್ಲಾಪುರ ಬಿ.ವ್ಹಿ. ನಯಸೇನ ಮತ್ತು ಅವನ ಕೃತಿಗಳು ಪು.271

4) ಕುಲಕರ್ಣಿ ಬಿ.ಎ. (ಸಂ.) ಸಮಯ ಪರೀಕ್ಷೆ ಕನ್ನಡ ಸಂಶೋಧನಾ ಸಂಸ್ಥೆ ಕ.ವಿ.ವಿ. ಧಾರವಾಡ 1958

5) ಕರ್ನಾಟಕದ ಪರಂಪರೆ ಸಂಪುಟ-1, ಪು.450

6) ನಾರಾಯಣ ಪಿ.ವಿ, ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು.10

# ಅಧ್ಯಾಯ 2

## ಮಹಿಳೆ ಮತ್ತು ಸಮಾಜ

ವೇದಕಾಲದಲ್ಲಿ ಸಮಾಜದಲ್ಲಿ ಮಹಿಳೆಗೆ ಉನ್ನತವಾದ ಸ್ಥಾನಮಾನವಿತ್ತು. ವೇದಕಾಲದಿಂದ ಸ್ಮೃತಿಗಳ ಕಾಲಕ್ಕೆ ಬರುವ ವೇಳೆಗಾಗಲೇ ಸಮಾಜದಲ್ಲಿ ಮಹಿಳೆಯರಿಗಿದ್ದ ಗೌರವಗಳು ಕಡಿಮೆಯಾಗ ತೊಡಗಿದವು. ಹೆಣ್ಣು ಬಾಲ್ಯಾವಸ್ಥೆಯಲ್ಲಿ ತಂದೆತಾಯಿಯರ ಆಶ್ರಯದಲ್ಲಿ, ಮದುವೆಯಾಗಿ ಗಂಡನ ಆಶ್ರಯದಲ್ಲಿ, ವೃದ್ಧಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲಿರುವುದರಿಂದ ಮನು 'ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂದು ಸಾರಿದ. ಆದರೆ ಅದನ್ನು ನಮ್ಮ ಜನರು ಹೇಗೆ ಬೇಕೋ ಹಾಗೆ ತಿರುಚಿ ಅರ್ಥೈಸತೊಡಗಿದರು. ಸಾಲದುದಕ್ಕೆ ಗಂಡು ಮಗನನ್ನು ಹಾರೈಸಿಯೇ ಗರ್ಭಿಣಿಗೆ ಪುಂಸವನಕರ್ಮ ಮಾಡುವುದು ಅಸ್ತಿತ್ವಕ್ಕೆ ಬಂದಿತು. ಈ ಹಿನ್ನಲೆಯಲ್ಲಿ ಸುಪುತ್ರೋಕುಲದೀಪಃ ಎಂದು ಭಾವನೆಯಿಂದ ಗಂಡು ಮಗುವಿಗಾಗಿ ಆಸೆ ಮಾಡಿದವರನ್ನು ಉಲ್ಲೇಖಿಸುವ ಶಾಸನಗಳು ಹೆಣ್ಣು ಮಗುವಿನ ವಿಷಯದಲ್ಲಿ ಮೌನ ತಾಳಿದುದು ಸ್ವಾಭಾವಿಕವಾಗಿದೆ. ಆದರೆ ಕ್ರಿ.ಶ. 1184ರ ಒಂದು ಶಾಸನವೂ ಚಂಡಯ್ಯವುಲ್ಲಿದೇವಿಯರು ತಮ್ಮ ಮಗಳು ಸೋಮವ್ವೆಯನ್ನು 'ಸುಪುತ್ರಿ ಕುಲದೀಪಿಕೆ' ಎಂದು ಕರೆದುದು ಗಮನಾರ್ಹ ಸಂಗತಿಯಾಗಿದೆ.[1] ಬೆಳಪನಾಯಕನ ಮಡದಿ ಚುಂಗವ್ವೆಯನ್ನು ಕುರಿತು ಹೇಳಿದ.

ಬಡವರ್ಗ್ಗೆ ಕಲ್ಪ ವೃಕ್ಷಮನೆಡ
ರಡಸಿದವರ್ಗೆರತ್ನದಾಗರವಂ ತಾಂ
ಪಡೆದೀವತೆರದೆ ಚುಂಗವ್ವೆ
ಪಡೆದಳ್-ರತ್ನಮೆನಿಪ ಗೌರಲಸುತೆಯಂ॥

ಎಂಬ ಮಾತು ಅಪರೂಪಕ್ಕೆ ಹೆಣ್ಣು ಮಗುವಿನ ಜನನ ಸಾರ್ಥಕತೆಯನ್ನು ಸಾರುತ್ತದೆ.[2]

ನಯಸೇನನು ಧರ್ಮಾಮೃತದಲ್ಲಿ ಗಂಡು ಮಗು ಜನಿಸಿದರೆ ಕುಟುಂಬದ ಸದಸ್ಯರೆಲ್ಲ ಬಹಳ ಖುಷಿ ಪಡುತ್ತಿದ್ದರು ಎಂದು ಉಲ್ಲೇಖಿಸಿದ್ದಾನೆ.[3] ಹಸುಗೂಸಿಗೆ ಮೊಲೆ ಹಾಲನ್ನು ಉಣಿಸುವಲ್ಲಿ ಆ ಮಗುವಿನ ತಾಯಿಯಂತೂ ಇನ್ನೂ ಹೆಚ್ಚಿನ ಸಂತೋಷ ವ್ಯಕ್ತ ಮಾಡುತ್ತಿದ್ದಳು.[4] ಹೀಗೆ ಬಾಲ್ಯದಲ್ಲಿ ಬಾಲಕಿಗಿಂತಲೂ ಬಾಲಕನಿಗೆ ಹೆಚ್ಚು ಪ್ರಾಶಸ್ತ್ಯವಿದ್ದುದು ಅಭಿವ್ಯಕ್ತವಾಗುತ್ತದೆ.

**2.1 ಶಿಕ್ಷಣ**

'ವಿದ್ಯಾವಿಹೀನಃ ಪಶುಃ' ಎಂಬ ಆರ್ಯೋಕ್ತಿಯಂತೆ ಪುರುಷರಾಗಲಿ, ಮಹಿಳೆಯಾಗಲಿ, ವಿದ್ಯೆ ಇಲ್ಲದವರು ಪಶುಸಮಾನರಾಗುತ್ತಾರೆ. ಪಶುವಿಗಿಂತ ಭಿನ್ನವಾದ ಉತ್ತಮವಾದ ಜೀವನವನ್ನು ಸಾಗಿಸಬೇಕಾದರೆ, ಅದಕ್ಕೆ ಯೋಗ್ಯ ಶಿಕ್ಷಣ ಅವಶ್ಯಕ ಮನೆಯೇ ಮೊದಲ ಪಾಠಶಾಲೆ, ಜನನಿ ತಾನೆ ಮೊದಲ ಗುರು ಎಂಬಂತೆ ತಾಯಿಯೇ ಮಗುವಿಗೆ ಮೊದಲ ಗುರುವಾಗುತ್ತಾಳೆ. 'ಮಕ್ಕಳ ಸ್ಕೂಲ್ ಮನೇಲಲ್ವೆ' ಎಂಬ ಕೈಲಾಸಂ ಕೇಳಿದಂತೆ ಶೈಶವಾವಸ್ಥೆಯಲ್ಲಿ ಹೆಚ್ಚು ವೇಳೆ ತಾಯಿಯ ಬಳಿಯಲ್ಲಿಯೇ ಕಳೆಯುವ ವ್ಯಕ್ತಿಗೆ ಮೊಟ್ಟಮೊದಲು ಸಿಗುವುದು ತಾಯಿಯಲ್ಲಿರುವ ಶಿಕ್ಷಣ ಸಂಸ್ಕಾರಗಳೇ, ಶಿವಾಜಿ ಮಹಾತ್ಮಾಗಾಂಧಿ ಮುಂತಾದವರೆಲ್ಲ ಮಹಾವ್ಯಕ್ತಿಗಳಾಗಲು ಬಾಲ್ಯದಲ್ಲಿ ತಾಯಿಯಿಂದ ಅವರಿಗೆ ದೊರೆತ ಶಿಕ್ಷಣ ಸಂಸ್ಕಾರಗಳೇ ಕಾರಣ ಆಗಿವೆ.

ಅಗ್ರಹಾರ, ಬ್ರಹ್ಮಪುರಿ, ಘಟಕಸ್ಥಳಗಳಲ್ಲಿ ಅಧ್ಯಯನ ಮಾಡಿದ ಯಾವ ಮಹಿಳೆಯ ಉಲ್ಲೇಖವು ಇಲ್ಲ. ಆದಿಪುರಾಣದಲ್ಲಿ ವೃಷಭದೇವನ ಮಕ್ಕಳಾದ ಬ್ರಾಹ್ಮಿ ಸುಂದರಿಯರಿಗೆ ಕ್ರಮವಾಗಿ ಅಕ್ಷರ ಸಂಖ್ಯೆಗಳನ್ನು ಹೇಳಿಕೊಟ್ಟನೆಂಬುದನ್ನು ನೋಡಿದ ಹಿಂದಿನ ಕಾಲದಲ್ಲಿ ಹೆಣ್ಣುಮಕ್ಕಳಿಗೆ ತಂದೆಯೇ ಓದು ಬರಹ ಕಲಿಸುತ್ತಿದ್ದನೆಂಬುದರ ಸೂಚನೆಯಾಗಿ ಇಟ್ಟುಕೊಳ್ಳ ಬಹುದು.[5]

ಮಹಿಳೆಯರು ಹಲವರು ವಿದ್ವತ್ತಿನ ಬಿರುದುಗಳನ್ನು ಹೊಂದಿರುವುದನ್ನು ನೋಡಿದಾಗ ಕೆಲವರಾದರೂ ಉನ್ನತ ವರ್ಗದ ಮಹಿಳೆಯರು ಶಿಕ್ಷಣವನ್ನು ಪಡೆದಿರಲು ಸಾಕು (ಈ ಕುರಿತು ಮಹಿಳೆ ಮತ್ತು ಶಿಕ್ಷಣ ಹಾಗೂ ಸಾಹಿತ್ಯ ಎಂಬ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ).

**2.1.1 ಮದುವೆ**

ಮದುವೆ ಕುಟುಂಬದ ಪೂರ್ವಸಿದ್ಧತೆ ಎನ್ನಬಹುದು. ಮದುವೆಯಿಲ್ಲದ ಬದುಕನ್ನು ಸಾಗಿಸುವವರು ತೀರ ವಿರಳ. ಮಹಿಳೆಯರಾಗಲಿ, ಪುರುಷರಾಗಲಿ ಒಬ್ಬರನೊಬ್ಬರು ಬಿಟ್ಟು ತಮ್ಮಷ್ಟಕ್ಕೇ ತಾವೇ ಇರುವುದು ಅಸ್ವಾಭಾವಿಕ. ಆ ರೀತಿಯ ಜೀವನ ತುಂಬು ಜೀವನವಲ್ಲ ತುಂಡು ಜೀವನ ಅದಕ್ಕೆಂದೇ "ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆಹೊಯ್ದಂತೆ, ಪುರುಷ ನಿಲ್ಲದವಳ ಬಾಳುವೆ ನೀರೊಳಕ್ಷರ ಬರೆದಂತೆ" ಎಂದು ಹೇಳಿದ್ದಾರೆ. ಅವರಿಬ್ಬರೂ ಒಟ್ಟಾಗಿ, ಒಬ್ಬರ

ಸೃಷ್ಟಿಯ ನಿಯಮ ಅದರಲ್ಲೂ ಮಹಿಳೆಯರ ಜೀವನದಲ್ಲಿ ಮದುವೆ ಅವರ ಬಾವೀ ಹಾಗೂ ಉಪಯುಕ್ತ ಜೀವನದ ರೂಪರೇಷೆಗಳನ್ನು ರೂಪಿಸುವ ಭೂಮಿಕೆ ಮಹಿಳೆಯ ಜೀವನದ ಗುರಿಯೇ ಮದುವೆ. ಇದರಲ್ಲಿಯೇ ಅವಳ ಜೀವನದ ಸಾರ್ಥಕವಿದೆಯೆಂಬ ಕಲ್ಪನೆ ನಮ್ಮ ಸಮಾಜದಲ್ಲಿದೆ.

ಉಪನಿಷತ್ತಿನ ಪ್ರಕಾರ ಮದುವೆಯು ಮೋಕ್ಷವನ್ನು ಒದಗಿಸುವ ಶ್ರೇಷ್ಠ ಸಾಧನವೆಂಬುದನ್ನು ಪ್ರತಿಪಾದಿಸಿದೆ. ಅದರಂತೆ "ಅಪುತ್ರಸ್ಯ ಗತಿ ನಾಗಸ್ತಿ" ಎಂದು ಮಕ್ಕಳಿಲ್ಲದವರಿಗೆ ಮೋಕ್ಷವಿಲ್ಲವೆಂಬ ಮಾತು ವಾಡಿಕೆಯಾಯಿತು. ಹೀಗಾಗಿ ಮದುವೆಯು ಮನುಷ್ಯನಿಗೆ ಅಗತ್ಯವಾದ ಸಂಸ್ಕಾರವೆಂಬುದು ನಿರ್ವಿವಾದವಾಗಿ ಹೇಳಬಹುದು.

ವೈವಿಧ್ಯಮಯವಾದ ಈ ಜಗತ್ತಿನಲ್ಲಿ ವಿವಿಧ ನಮೂನೆಯ ವಿವಾಹಗಳು ಜಾರಿಯಲ್ಲಿ ಇರುವುದನ್ನು ಕಾಣುತ್ತೇವೆ. ಹಿಂಧೂಧರ್ಮ ಶಾಸ್ತ್ರದಲ್ಲಿ ಬ್ರಾಹ್ಮ, ಆಷಣ, ಪ್ರಜಾಪಾತ್ರಯ, ದೈವ, ರಾಕ್ಷಸ, ಅಸುರ, ಗಾಂಧರ್ವ, ಪೈಶಾಚ ಹೀಗೆ ಎಂಟು ಬಗೆಯ ವಿವಾಹ ಪದ್ಧತಿಗಳನ್ನು ಹೇಳಲಾಗಿದೆ.[6]

**2.1.2 ಬ್ರಾಹ್ಮ**

ಕನ್ಯೆಗೆ ಯೋಗ್ಯನಾದ ಸುಶೀಲ, ವಿದ್ವಾಂಸ ಪುರುಷನಿಗೆ ಸತ್ಕಾರ ಮಾಡಿ, ವಸ್ತ್ರಾದಿಗಳಿಂದ ಅಲಂಕೃತಳಾದ ಕನ್ಯೆಯನ್ನು ಉತ್ತಮವಾದ ಪುರುಷನನ್ನು ಕರೆದು ಅಂದರೆ ಯಾವ ಪುರುಷನನ್ನು ಕನ್ಯೆಯು ಒಪ್ಪಿದ್ದಾಳೋ ಅವನಿಗೆ ಆ ಕನ್ಯೆಯನ್ನು ಕೊಟ್ಟು, ಮಾಡುವ ವಿವಾಹಕ್ಕೆ ಬ್ರಾಹ್ಮ ವಿವಾಹವೆನ್ನುತ್ತಾರೆ.

**2.1.3 ದೈವ**

ವಿಶಾಲ ಯಜ್ಞದಲ್ಲಿ ದೊಡ್ಡದೊಡ್ಡ ವಿದ್ವಾಂಸರನ್ನು ವರಸಿ, ಅವರಲ್ಲಿ ಕರ್ಮ ಮಾಡುವ ವಿದ್ವಾಂಸನಿಗೆ ವಸ್ತ್ರಭೂಷಣಾಧಿಗಳಿಂದ ಸುಶೋಭಿತಳಾದ ಕನ್ಯೆಯನ್ನು ಕೊಟ್ಟು ವಿವಾಹ ಮಾಡುವುದು ದೈವ ವಿವಾಹವೆನಿಸುತ್ತದೆ.

**2.1.4 ಅರ್ಷ**

ವರಿನಿಂದ ಒಂದು ಜೋಡಿ ಹಸು, ಎತ್ತು, ಅಥವಾ ಎರಡು ಜೋಡಿ ಪಡೆದು ಧಾರ್ಮಿಕ ರೀತಿಯಿಂದ ಕನ್ಯಾದಾನ ಮಾಡುವುದಕ್ಕೆ ಅರ್ಷ ವಿವಾಹವೆನಿಸುವುದು.

**2.1.5 ಪ್ರಜಾಪತ್ಯ**

ಕನ್ಯಾ ಮತ್ತು ವರ ಇವರುಗಳನ್ನು ಯಜ್ಞ ಶಾಲೆಯಲ್ಲಿ ವಿಧಿಪೂರ್ವಕವಾಗಿ ಎಲ್ಲರ ಸಮಕ್ಷಮ, ನೀವಿಬ್ಬರೂ ಕಲೆತು ಗೃಹಸ್ಥಾಶ್ರಮದ ಕರ್ಮಗಳನ್ನು ಯಥಾವತ್ತಾಗಿ ಆಚರಿಸಿ ಎಂದು ಹೇಳಿ ಇಬ್ಬರ ಪ್ರಸನ್ನತೆಯಿಂದ ಆಗುವ ಪಾಣಿಗ್ರಹಣಕ್ಕೆ ಪ್ರಜಾಪತ್ಯ ವಿವಾಹವೆನ್ನುತ್ತಾರೆ.

**2.1.6 ಅಸುರ**

ವರನ ಕಡೆಯವರಿಗೂ ಮತ್ತು ಕನ್ಯೆಗೂ, ಯಥಾ ಶಕ್ತಿ ಹಣಕೊಟ್ಟು, ಕನ್ಯೆಯನ್ನು ಹೋಮ ಆದಿ ವಿಧಿಪೂರ್ವಕವಾಗಿ ಕೊಡುವುದು ಅಸುರ ವಿವಾಹವೆನಿಸುತ್ತದೆ.

**2.1.7 ಗಾಂಧರ್ವ**

ವರ ಮತ್ತು ಕನ್ಯೆಯರ ಸ್ವಂತ ಇಚ್ಛೆಯಿಂದ, ಇಬ್ಬರೂ ಪರಸ್ಪರ ಸಂಯೋಗ ಹೊಂದುವುದು ಮತ್ತು ತಮ್ಮ ಮನಸ್ಸಿನಲ್ಲಿ ನಾವಿಬ್ಬರೂ ಪತಿ ಪತ್ನಿಯರೆಂದು ಒಪ್ಪಿಕೊಳ್ಳುವುದು. ಇದು ಕಾಮದಿಂದ ಆದ ಗಾಂಧರ್ವ ವಿವಾಹವೆನಿಸುವುದು.

**2.1.8 ರಾಕ್ಷಸ**

ಹನನ, ಛೇದನ ಎಂದರೆ ಕನ್ಯೆಯ ಕಡೆಯಿಂದ ಅಡ್ಡಿ ಮಾಡುವುವವರನ್ನು ಹೊಡೆದು, ಕಿರುಚಾಡುತ್ತಿರುವ, ಅಳುತ್ತಿರುವ, ನಡುಗುತ್ತಿರುವ ಮತ್ತು ಹೆದರಿದ ಕನ್ಯೆಯನ್ನು ಬಲವಂತದಿಂದ ಅಪಹರಿಸಿ, ವಿವಾಹವಾಗುವುದು, ರಾಕ್ಷಸ ಅಂದರೆ ಅತಿ ನೀಚ ವಿವಾಹವೆನಿಸುವುದು.

**2.1.9 ಪೈಶಾಚ**

ನಿದ್ರಿಸುತ್ತಿರುವ, ಹುಚ್ಚು ಹಿಡಿದಿರುವ ನಶೆಯ ಸೇವನೆ ಮಾಡಿ, ಉನ್ಮತ್ತಳಾಗಿರುವ ಕನ್ಯೆಯನ್ನು ಏಕಾಂತದಲ್ಲಿ ಪಡೆದು, ದೂಷಿತ ಮಾಡುವುದು ಇದು ಎಲ್ಲ ವಿವಾಹಗಳಲ್ಲೂ ಅತೀ ಕೆಟ್ಟದಾದುದು. ಅತಿ ದುಷ್ಟವಾದ ಪೈಶಾಚ ವಿವಾಹವಾಗಿದೆ.

ಮೊದಲಿನ ನಾಲ್ಕು ವಿವಾಹ ಪದ್ಧತಿಗಳು ಶ್ರೇಷ್ಠವಾದವುಗಳೆಂದು ಅವುಗಳಿಂದ ಉತ್ಪನ್ನವಾಗುವ ಸಂತಾನಗಳು ವೇದಾದಿ ವಿದ್ಯೆಗಳಿಂದ ತೇಜಸ್ವೀ, ಆಪ್ತ ಪುರುಷರುಗಳ ಸಮ್ಮತ ಮತ್ತು ಅತ್ಯುತ್ಕ್ರವಾಗುವುವು. ಕೊನೆಯ ನಾಲ್ಕು ಅಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ ಇವು ದುಷ್ಟ ವಿವಾಹ ಪದ್ಧತಿಗಳೆಂದು ಪ್ರತೀತಿ. ಈ ದ್ವೇಷಿ ವಿವಾಹಗಳಲ್ಲಿ ಉತ್ಪನ್ನವಾಗುವ ಸಂತಾನಗಳು ನಿಂದನೀಯ ಕರ್ಮಕರ್ತರು, ಮಿಥ್ಯವಾದಿಗಳು ವೇದಧರ್ಮದ ದ್ವೇಷಗಳು ಮತ್ತು ಅಧಿಕ ನೀಚ ಸ್ವಭಾವವುಳ್ಳವರೂ ಆಗುವರು ಎಂದು ಧರ್ಮಶಾಸ್ತ್ರಗಳು ಉಲ್ಲೇಖಿಸುತ್ತವೆ.[7] ಇವುಗಳಲ್ಲದೆ ಸ್ವಯಂವರ ಪದ್ಧತಿ, ಕನ್ಯಾಪಹರಣದ ಪದ್ಧತಿ, ವಿವಾಹ ವಿಚ್ಛಿತ್ತ, ವರ್ಣಸಂಕರ ಎಂಬ ಇನ್ನೂ ಹಲವಾರು ಪದ್ಧತಿಗಳೂ ಸಹ ಜಾರಿಯಲ್ಲಿರುವುದನ್ನು ಕಾಣುತ್ತೇವೆ. ಆಧುನಿಕ ಯುಗಕ್ಕೆ ಬಂದರೆ 'ರಿಜಿಸ್ಟರ್ಡ್' ಮದುವೆಯು ಹೆಚ್ಚು ಹೆಚ್ಚು ಪ್ರಚಲಿತವಿರುವುದನ್ನು ನೋಡಬಹುದು.

ಚಾಲುಕ್ಯ ಪೂರ್ವ ಹಾಗೂ ಚಾಲುಕ್ಯರ ಕಾಲದಲ್ಲಿ ಕರ್ನಾಟಕದಲ್ಲಿ ಕೆಲವು ಪದ್ಧತಿಗಳು ಜಾರಿಯಲ್ಲಿರುವುದನ್ನು ಕಾಣುತ್ತೇವೆ. ರಾಷ್ಟ್ರಕೂಟ ಒಂದನೆಯ ಅಮೋಘವರ್ಷನ ಸಂಜಾನ ತಾಮ್ರ ಶಾಸನವು. ಇಂದ್ರರಾಜಸ್ತತೋ ಗೃಹ್ಣಾತ್ ಯಶ್ಚಲುಕ್ಯ ನೃಪಾತ್ಮಾಜಾಂ. ರಾಕ್ಷಸೇನ ವಿವಾಹೇನ ಕಹೇ ಖೇಟಕ ಮಂಡಲೇ ಅಂದರೆ ಇಂದ್ರರಾಜನೆಂಬವ ಖೇಟಕ ಮಂಡಳದ ಯುದ್ಧದಲ್ಲಿ ಭವಗಣ ಎಂಬ ಚಾಲುಕ್ಯ ರಾಜಕುಮಾರಿಯನ್ನು ಅಪಹರಿಸಿ ತಂದು ರಾಕ್ಷಸ ವಿವಾಹ ಮಾಡಿಕೊಂಡಿದ್ದನೆಂಬ ಉಲ್ಲೇಖವಿದೆ.[8]

ನವಸಾರಿಯ ತಾಮ್ರ ಶಾಸನವು ರಾಷ್ಟ್ರಕೂಟ ದಂತಿದುರ್ಗ ಚಾಲುಕ್ಯ ಕೀರ್ತಿವರ್ಮನ ಮಗಳು ಲಕ್ಷ್ಮೀದೇವಿಯ ವಿವಾಹವಾದುದನ್ನು "ಚಾಲುಕ್ಯ ವಂಶಜಲಧೇಃ ಸ್ವಯಮೇವಲಕ್ಷ್ಮೀರ್ಯಂ ಶಂಖಚಕ್ರ ಕರಲಾಂಛನಮಾಜಗಾಮ" ಎಂದು ಹೇಳಿದೆ. ಸ್ವಯಂಮೇವ ಎನ್ನುವುದು ಸ್ವಯಂವರವನ್ನು ನಾಚಿಸುವಂತಿದೆ.[9]

ಬಿಲ್ಹಣನು ತನ್ನ ವಿಕ್ರಮಾಂಕದೇವ ಚರಿತ್ರೆಯಲ್ಲಿ ಶಿಲಾಹಾರ ಮನೆತನದ ಚಂದಲ ದೇವಿಯನ್ನು ಸ್ವಯಂವರ ಪೂರ್ವಕ ವರಿಸಿದನೆಂದು ಹೇಳಿದ್ದಾನೆ.[10] ಆರನೆಯ ವಿಕ್ರಮಾದಿತ್ಯನು ಕಂಕೋಜ ಪುತ್ರಿ ಲಕ್ಷ್ಮಾದೇವಿಯನ್ನು ಮದುವೆಯಾಗಿರುವುದನ್ನು ಕ್ರಿ.ಶ. 1080ರ ಶಾಸನದಲ್ಲಿ

ಇವಳನ್ನು ಪಿರಿಯರಸಿ ಲಕ್ಷ್ಮಾದೇವಿ ಎಂದು ಕರೆದಿರುವುದರಿಂದ ಅವಳು ವಿಕ್ರಮಾದಿತ್ಯನು ಕುಮಾರ ವೃತ್ತಿಯಿಂದ ಆಳುತ್ತಿರುವಾಗಲೇ ಮದುವೆಯಾಗಿರಬಹುದು. ಸಾಮಾನ್ಯ ಶಿಲ್ಪಿಯಾಗಿದ್ದ ಕಂಕೋಜನ ಮಗಳನ್ನು ವರಿಸಿರುವುದನ್ನು ಗಮನಿಸಿದರೆ ಇದು ಬಹುಶಃ ಪ್ರೇಮ ವಿವಾಹವಾಗಿರಬಹುದು ಎಂಬ ಸಂದೇಹ ಬರದಿರದು.[11] ಈಕೆ ತನ್ನ ತಂದೆ ತಾಯಿಯೊಂದಿಗೆ ಇದ್ದು ತಮ್ಮ ತಂದೆಯ ಹೆಸರಿನ ಕಂಕೇಶ್ವರ ದೇವರಿಗೆ ಭೂಮಿ, ನಿವೇಶನ, ಹೂವಿನ ತೋಟ ದಾನ ಬಿಟ್ಟುದ್ದನ್ನು ಶಾಸನವೊಂದು ಉಲ್ಲೇಖಿಸುತ್ತದೆ.[12]

### 2.2 ಮದುವೆಯ ಸಂಬಂಧಗಳು

ಮದುವೆಗಳು ಸಾಮಾನ್ಯವಾಗಿ ಸವರ್ಣಿಯರಲ್ಲಿಯೇ ನಡೆಯುತ್ತಿರಬೇಕು. ಅಲ್ಲದೇ ತೀರ ಹತ್ತಿರದ ಕುಟುಂಬಗಳಲ್ಲಿಯೇ ನಡೆಯುತ್ತಿದ್ದಂತೆ ತೋರುತ್ತದೆ. ಕ್ರಿ.ಶ. 1146 ರ ಯರಗಲ್ ಶಾಸನ ದೇವಿಯಕ್ಕ ಎಂಬುವವಳು ತನ್ನ ಮಗ ಅಪ್ಪರಾಜನಿಗೆ ತನ್ನ ತಮ್ಮ ಕೇಶವಾದಿತ್ಯನ ಮಗಳು ಸಿರಿದೇವಿಯನ್ನು ತಂದುಕೊಂಡದ್ದನ್ನು ಉಲ್ಲೇಖಿಸಿದರೆ,[13] ಹಂಪೆಯ ಶಾಸನವು ಚೌಡಯ್ಯನು ತನ್ನ ಹಿರಿಯ ಮಗಳಾದ ಕಾಮವ್ವೆಯನ್ನು ತನ್ನ ಕಿರಿಯ ಭಾವ (ಸೋದರತ್ತೆ ಕಾಮವ್ವೆಯ ಮಗ) ಹಾಚಯ್ಯನ ಮಗನಾದ ಮಾದಯ್ಯನಿಗೆ ಕೊಟ್ಟು ಮದುವೆ ಮಾಡಿದ್ದುದನ್ನು ಹೇಳುತ್ತದೆ.[14] ಇದರಿಂದ ಮದುವೆಗಳು ತೀರ ಹತ್ತಿರದ ಕುಟುಂಬಗಳಲ್ಲಿಯೇ ನಡೆಯುತ್ತಿದ್ದಿತು ಎಂಬುವುದು ಸ್ಪಷ್ಟವಾಗುತ್ತದೆ. ನಯಸೇನನು ಧರ್ಮಾಮೃತದಲ್ಲಿ ಸೋದರಳಿಯನಿಗೆ ಮಗಳನ್ನು ಕೊಡುತ್ತಿದ್ದರು ಎಂದು ಹೇಳಿರುವುದಲ್ಲದೆ (3–250) ಗೋತ್ರವನ್ನು ತಿಳಿಯದೆ ಕೂಸು ಕೊಡುತ್ತಿರಲಿಲ್ಲ ಹಾಗೆ ಮಾಡುವವರನ್ನು ಮೂರ್ಖರೆಂದೂ, ಎಗ್ಗರೆಂದೂ ಜನರು ಭಾವಿಸುತ್ತಿದ್ದರು (1–67) ವಧೂವರರನ್ನು ಮದವಳಿಗೆ, ಮದುವಳಿಗ ಎಂದು ಕರೆದಿದ್ದು, ಬಾಗೇವಾಡಿಯ ಮಾಲಗಾರ ಗೊತ್ತಳಿಗಳು ಅಲ್ಲಿಯ ಮಲ್ಲಿಕಾರ್ಜುನ ದೇವರಿಗೆ ಮದುವೆ ಮದುವಣಿಗನಲ್ಲಿ ಹಾಗ–1, ಮದುವಳಿಗೆಯಲ್ಲಿ ಹಾಗ–1, ಜೋಳ ಕೊಳಗ 3 ಬಿಟ್ಟುಕೊಡಲು ಒಪ್ಪಿರುವುದನ್ನು ಶಾಸನವು ಉಲ್ಲೇಖಿಸುತ್ತದೆ.[15] ಹಾಗೆ ಅಗ್ರಹಾರ ಕೋಲಾರದ ಮಲ್ಲಿಕಾರ್ಜುನ ದೇವರಿಗೆ ದಾಸನಗೌಡ ಕೊತ್ತಳಿಗಳು, ಬಿಲ್ಲಮೂ ನೂರ್ಖರು, ಮಾಣಿಗಡೆಗನೂರ ಕೊತಳಿಗಳು ಕೊಡಗೂಸಿನ (ಕೊಡಗೂಡು=ಕೊಡುವಕೂಸು=ಕನ್ಯೆ) ಮದುವೆಗೆ ಹಣ, ಹಾಗ ಮದುವತ್ತಿಗೆ ಆಡಂಬೊಳೆ, ಬಾಡು ವೀಳೆಯ ಎಂದು ಆಯ ಕೊಟ್ಟ ಉಲ್ಲೇಖ ಅಲ್ಲಿನ ಶಾಸನದಲ್ಲಿದೆ.[16]

ಗಂಡು ಹೆಣ್ಣಿನ ತಾರಾಬಲ, ಚಂದ್ರಬಲ, ರಾಶಿಕೂಟ ಗಣಗಳ ಸಂಬಂಧ ನೋಡಿ ಶುಭಲಗ್ನ ನಿರ್ಧರಿಸುತ್ತಿದ್ದುದನ್ನು ವಿಶೇಷವಾಗಿ ನಿರ್ಮಿಸಲಾದ ಚಪ್ಪರದಲ್ಲಿ ದಿಬ್ಬಣದ ಮಧ್ಯ ಶಾಸ್ತ್ರೋಕ್ತವಾಗಿ ವಿವಾಹ ನೆರವೇರಿಸುತ್ತಿದ್ದುದನ್ನು ವಚನಕಾರರು ಹೇಳಿದ್ದಾರೆ.[17]

ನಯಸೇನನು ತನ್ನ ಧರ್ಮಾಮೃತದಲ್ಲಿ ನೈಮಿತ್ತಿಕರಿಂಕ ಮುಹೂರ್ತ ಕೇಳಿ, ಶುದ್ಧ ಮಾಸದೊಳ್ ಚಂದ್ರಬಲ, ತಾರಾಬಲ ಕೂಡಿ ಬಂದಾಗ ಮದುವೆ ಮಾಡುತ್ತಿದ್ದರು ಎಂದು ಹೇಳಿದ್ದಾನೆ.[18] ವಿವಾಹ ಮಂಟಪವನ್ನು ಬಹು ಸುಂದರವಾಗಿ ಸಿಂಗರಿಸುತ್ತಿದ್ದರು. ದುಕಲಧ್ವಜ, ಮಲಯಜದ ಎಳದಳಿರ ತೋರಣ, ಮುಕ್ತಾವಳಿ, ಪೊಸರಂಗವಲ್ಲಿಗಳು ಅಲ್ಲಿ ಶೋಭಿಸುತ್ತಿದ್ದವು.[19]

## 2.3 ಮದುವೆಯ ವಯಸ್ಸು

ಪ್ರಾಚೀನರು ಹುಡುಗಿಯು ಋತುಮತಿಯಾಗುವುದರೊಳಗೆ ಮದುವೆ ಮಾಡದಿದ್ದರೆ ತಮಗೆ ನರಕಪ್ರಾಪ್ತಿ ಎಂಬ ನಂಬಿಕೆಯಿಂದಾಗಿ ಬಾಲ್ಯ ವಿವಾಹವನ್ನು ಮಾಡುತ್ತಿದ್ದರು. ಇದರಲ್ಲಿ ಅವರಿಗೆ ಯಾವ ತಪ್ಪುಗಳು ಕಾಣದ ಕಾರಣ ಅದನ್ನು ಅವರು ಮುಂದುವರಿಸಿಕೊಂಡು ಬಂದರು. ಋಗ್ವೇದದ ವಿವಾಹ ಸೂಕ್ತವೊಂದನ್ನು ಬಿಟ್ಟರೆ ಉಳಿದ ಸ್ಮೃತಿಗಳು ಅದನ್ನು ಸಮರ್ಥಿಸಿವೆ.[20] ವಿದೇಶಿ ಪ್ರವಾಸಿ ಅಲ್ಬೇರೂನಿ ಹಿಂದೂಗಳು ಬಾಲ್ಯದಲ್ಲಿಯೇ ಮದುವೆ ಮಾಡಿಕೊಳ್ಳುತ್ತಿದ್ದುದನ್ನು ತಿಳಿಸಿದ್ದಾನೆ.[21] ಕೆಲವು ಶಾಸನಗಳಲ್ಲಿ ಕಂಡು ಬರುವ ಕೊಡಗೂಸಿನ ಮದುವೆ ಎಂಬ ಹೇಳಿಕೆಗಳು ಬಾಲ್ಯ ವಿವಾಹವನ್ನು ಬೆಂಬಲಿಸುವುದುಂಟು. ಮೇಲೆ ಉಲ್ಲೇಖಿಸಿರುವ ಕೋಲಾರದ ಶಾಸನವು ಕೊಡಗೂಸಿನ ಮದುವೆಯನ್ನು ಹೇಳಿದೆ.

## 2.4 ಮದುವೆಯ ಸಂದರ್ಭ

ಅರಸರು ತಮ್ಮ ಮಕ್ಕಳ ಶುಭಕಾರ್ಯಗಳನ್ನು ಕೈಗೊಳ್ಳುವಾಗ ತಮ್ಮ ಮಂತ್ರಿ ದಂಡನಾಯಕರುಗಳ ವಿವಾಹ ಕಾರ್ಯಗಳನ್ನು ನೆರವೇರಿಸಿಕೊಡುವುದಲ್ಲದೇ ದತ್ತಿಗಳನ್ನು ಕೊಡುತ್ತಿದ್ದರು. ಚಾಲುಕ್ಯ ತ್ರೈಲೋಕ್ಯಮಲ್ಲ ನಿಜಧರ್ಮಪತ್ನಿ ವೆರಸು ಧರ್ಮಾರ್ತ್ಥ ಕಾಮಂಗಳನನು ಭವಿಸುತ್ತುಂ ಸಕವರ್ಷ 969ನೆಯ ಸರ್ಬಜಿತು ಸಂವಸ್ತರದ ವೈಶಾಖ ಶುದ್ಧ ಬುಧವಾರದಂದು ಷೋಡಶಮಹಾದಾನ ದಕ್ಷಿಣೆಯ ಕಾಲದೊಳು ಸೇನಾಧಿಪತಿ ದಂಡನಾಯಕಂ ನಾಗವರ್ಮಯ್ಯಂಗೆ

ವಿವಾಹಂ ಮಾಡಿ ಸಕ್ಕರೆಗೆ ಎಂಭತ್ತರೊಳಗಿನ ತಡಕಲ್ಲನ್ನು ದತ್ತಿಯಾಗಿ ಕೊಟ್ಟಿರುವುದನ್ನು ಕ್ರಿ.ಶ. 1047ರ ತಡಬೇಲ ಶಾಸನವು ಉಲ್ಲೇಖಿಸುತ್ತದೆ.[23]

## 2.5 ಕನ್ಯಾದಾನ

ದಾನಗಳ ಸಾಲಿನಲ್ಲಿ ಈ ಕನ್ಯಾದಾನವನ್ನು ಕುರಿತು ಶಾಸನಗಳು ಉಲ್ಲೇಖಿಸುತ್ತವೆ. ಅದರಲ್ಲೂ ದೇವರ ಸನ್ನಿಧಾನದಲ್ಲಿ ಕೈಗೊಳ್ಳುವ ಈ ಕನ್ಯಾದಾನ ಹೆಚ್ಚು ಪುಣ್ಯದಾಯಿಯೆಂದು ನಮ್ಮವನ ಭಾವನೆಯಾಗಿತ್ತು. ಚಾಲುಕ್ಯ ಸೋಮೇಶ್ವರನ ಮಹಾಮಂಡಳೇಶ್ವರನಾಗಿದ್ದ ಸಾಂತಾರ ದೊರೆ ವೀರಶಾಂತರಸನ ಮನೋವಲ್ಲಭೆ ಚಾಗಲದೇವಿ ಪಲಬರುಂ ಬ್ರಾಹ್ಮಣರ ಕನ್ಯದಾನಮಂ ಮಾಡಿಸಿದ ವಿಷಯವನ್ನು ಕ್ರಿ.ಶ. 1062ರ ಹುಂಚ ಶಾಸನವು ಉಲ್ಲೇಖಿಸುತ್ತದೆ.[24] ಪಲ್ಲವ ಪೆರ್ಮಾನಡಿ ಜಯಸಿಂಘದೇವನ ಮಹಾಮಂಡಲೇಶ್ವರ ಚೆನ್ನರಸ ಭೂದಾನಮಸ್ವದಾನ, ಗೋದಾನ ಸುವರ್ಣದಾನ, ಕನ್ಯಾದಾನ ಮಾಡಿರುವನು.[25] ಹೀಗೇ ಕನ್ಯಾದಾನವನ್ನು ಮಾಡಿರುವ ಹಲವಾರು ಉಲ್ಲೇಖಗಳು ಶಾಸನದಲ್ಲಿ ಲಭಿಸುತ್ತವೆ.

## 2.6 ಮದುವೆದೆರೆ (ಮದುವೆಯ ಮೇಲಿನ ತೆರಿಗೆ)

ಪ್ರಾಚೀನ ಕಾಲದಿಂದ ಬಂದಿರುವ ಮದುವೆಯ ಮೇಲಿನ ತೆರಿಗೆಯನ್ನು ಚಾಲುಕ್ಯರ ಶಾಸನಗಳು ಉಲ್ಲೇಖಿಸಿರುವುದನ್ನು ಕಾಣುತ್ತೇವೆ. ಮದುವೆಯ ಕಾಲದಲ್ಲಿ ಹಾಕಿರುವ ಹಂದರದ ಮೇಲೆಯು ತೆರಿಗೆಯನ್ನು ಹಾಕಿರುವುದನ್ನು ಸಹ ಉಲ್ಲೇಖಿಸುತ್ತವೆ. ಅಗ್ರಹಾರ ಬಾಗೇವಾಡಿಯ ಮಲ್ಲಿಕಾರ್ಜುನದೇವರ ಧೂಪದೀಪಕ್ಕೆ ಮಾಲೆಗಾರ ಗೊತ್ತಳಿವೊಕ್ಕಲು ಮದುವೆ ಮದುವಣಿಗನಲ್ಲಿ ಒಂದು ಹಾಗ ಮದವಳಿಗೆಯಲ್ಲಿ ಒಂದು ಹಾಗ ಎರಡು ಕೊಳಗ ಜೋಳವನ್ನು ಬಿಟ್ಟು ಕೊಟ್ಟಿರುವುದನ್ನು ಅಲ್ಲಿರುವ ಕ್ರಿ.ಶ. 1169ರ ಶಾಸನವೊಂದು ಉಲ್ಲೇಖಿಸುತ್ತದೆ.[26] ತುಂಬರ ಹೊಸೂರದ ಮೂಲಸ್ಥಾನ ರಾಮೇಶ್ವರ ದೇವರ ಗಂಧ ಧೂಪ ನಿವೇದ್ಯಕ್ಕೆ ಎಪ್ಪತ್ತೊಕ್ಕಲು ಮದುವೆಯ ಪಂದರವಣವನ್ನು ಬಿಟ್ಟುಕೊಟ್ಟಿರುವರು.[27] ಇನ್ನೊಂದು ಶಾಸನದಲ್ಲಿ ಮಹಾ ಮಂಡಲೇಶ್ವರ ಮನ್ನೆಯ ಘಟದೇವರಸ ಮದುವೆಯಲ್ಲಿ ಹಂದರವಣವನ್ನು ಸ್ವಯಂಭೂ ಕಲಿದೆವ ಸ್ವಾಮಿ ದೇವರ ನಂದಾದೀವಿಗೆಗೆ ಬಿಟ್ಟುಕೊಡಬೇಕೆಂದು ಆಜ್ಞೆ ಹೊರಡಿಸಿರುವನು.[28] ಈ ಹಣವನ್ನು ಹೆಚ್ಚು ಸ್ಥಳೀಯ ದೇವಾಲಯಗಳಿಗೆ ಉಪಯೋಗಿಸುತ್ತಿದ್ದುದು ಮೇಲಿನ ಉದಾಹರಣೆ ಗಳಿಂದ ಸ್ಪಷ್ಟವಾಗುತ್ತದೆ.

**2.7 ಮದುವೆ ಸಮಯದಲ್ಲಿ ನೀಡುವ ಬಳುವಳಿಗಳು**

ಮದುವೆಯ ಸಮಯದಲ್ಲಿ ವರನಿಗೆ ಉಡುಗೊರೆಯನ್ನು ಕೊಡುತ್ತಿದ್ದರು. ಇದು ಇಂದು ನೆನ್ನೆಯದಲ್ಲ ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವ ಸಂಪ್ರದಾಯವಾಗಿದೆ. ವಧುವಿನ ತಂದೆ ತಾಯಿಗಳು ತಮ್ಮ ಕೈಲಾದಷ್ಟು, ಸಂಪತ್ತನ್ನು ನೀಡಿ ಕನ್ಯಾದಾನವನ್ನು ಮಾಡುವುದನ್ನು ಕಾಣುತ್ತೇವೆ. ಇದು ಶ್ರೀಮಂತ ವರ್ಗದವರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜರುಗಿದರೆ ಮಧ್ಯಮ ಮತ್ತು ಸಾಮಾನ್ಯ ವರ್ಗದವರಲ್ಲಿಯು ಇದು ಜರುಗುತ್ತಿರುವುದನ್ನು ನಾವು ಕಾಣುತ್ತೇವೆ. ರಾಷ್ಟ್ರಕೂಟ ಬದ್ದೆಗದೇವನು ರೇವಕ್ಕನನ್ನು ಗಂಗಪೆರ್ಮಾಡಿ ಬೂತಯ್ಯನಿಗೆ ಧಾರೆ ಎರೆದು ಅವನಿಗೆ ಪುಲಿಗೆರೆ–300, ಬೆಳ್ವೊಲ–300, ಕಿಸುಕಾಡ–70 ನ್ನು ಬಳುವಳಿಯಾಗಿ ನೀಡಿದನೆಂದು ಕ್ರಿ.ಶ. 975 ಹೆಬ್ಬಾಳದ ಶಾಸನದಿಂದ ತಿಳಿದು ಬರುತ್ತದೆ.[29] ಚಟ್ಟದೇವನೆಂಬ ಗೋವೆಯ ಕದಂಬ ವಂಶದ ರಾಜಕುಮಾರನಿಗೆ ಮುದ್ಮರಿನೃಪನು ಪುತ್ರಿಯಂ ಸವಿಸ್ತರದೊಳೆ ಕೊಟ್ಟು ಅಳಿಯನಿಗೆ ಐದು ಲಕ್ಷ ಸುವರ್ಣ ನಾಣ್ಯಗಳನ್ನು ಅರ್ಪಿಸಿರುವ ಸಂಗತಿಯನ್ನು ಕ್ರಿ.ಶ. 1125ರ ಶಾಸನವೊಂದು ಹೇಳಿದೆ.[30] ಇದೇ ಶಾಸನವು ಚಟ್ಟದೇವನ ಮಗ ಮೊದಲನೆಯ ಜಯಕೇಶಿದೇವನು ತನ್ನ ಅಳಿಯ ಆರನೆಯ ವಿಕ್ರಮಾದಿತ್ಯನಿಗೆ ತನ್ನ ಮಗಳನ್ನು ಕೊಟ್ಟು ಭಂಡಾರದಲ್ಲಿಯ ಲೆಕ್ಕವಿಲ್ಲದಷ್ಟು ಉಡುಗೊರೆಯನ್ನೂ ಕೊಟ್ಟನೆಂದು ಅದೇ ಶಾಸನವು ಹೇಳಿದೆ. ಅದು ಹೀಗಿದೆ ಇದಿರ್ವಂದಾಗಡೆ ಕೂರ್ಪ ತನ್ನ ಮಗಳಂ ಧಾರಾನ್ವಿತಂ ಕೊಟ್ಟು ಪೆರ್ಚಿದಲಂಪಂ ಪಲವ ... ಯಂ ಕುದುರೆಯಂ ಭಂಡಾರಯಂ ಲೆಕ್ಕವಿಲ್ಲದೆ ತಲ್ಲಂಟಿಯನಾರ್ತು ಕೊಟ್ಟು ನೆಗಳ್ದಂ ಲೋಕೈಕ ಕಲ್ಪದ್ರುಮಂ[31]. ಇದೇ ಶಾಸನವು ಮುಂದುವರೆದು ಮೈಳಲದೇವಿಯ ಮದುವೆಯಲ್ಲಿ ಮಾವ ವಿಕ್ರಮಾದಿತ್ಯನು ಅಳಿಯ ಎರಡನೆಯ ಜಯಕೇಶಿಗೆ ನೀಡಿದ ಉಡುಗೊರೆಯನ್ನು ಶಾಸನವು ಹೀಗೆ ಹೇಳಿದೆ.

ಕನಕಾದ್ರ್ಯಗ್ರಂಗಳೇನಚ್ಚರಿಯೆ ಪೆಲವೆನಲ್ ಹೇಮಪೂಜಂಗಳಂರೋ
ಹನಗೇಂದ್ರವ್ರಾತವಿತ್ತೆತ್ತೆನೆ ಹಲವು ಮಹಾರತ್ನಂ ಪುಂಜಂಗಳಂ
ಕ್ರನ ಗಂಧೇಬಕ್ಕಮು ಚ್ಚೈಶ್ರವದ ಮಹಿಮೆಗಂ ಮೇಲೆನಲ್ಸಂದುದಂನೂ
ತನ ಭದ್ರೇ ಭಾಶ್ವಕೋಟಿ ಪ್ರಕರದುನಳಿಯಂಗಿತ್ತನಾಕುಂತಳಾಧೀಶ[32]

ಇದು ಅಲ್ಲದೆ ಈ ಮದುವೆಯ ಸಮಾರಂಭದ ಕಾಲದಲ್ಲಿ ಸೌರಾಷ್ಟ್ರದ ಸೋಮನಾಥ ದೇವರ ಧೂಪಕ್ಕೆ ಅಳಿಯ ಎರಡನೆಯ ಜಯಕೇಶಿಯ ಕೈಯಿಂದ ಕನಕಾಪುರವನ್ನು ದಾನವಾಗಿ ಕೊಡಿಸಿದಂತೆ ಅಲ್ಲಿಯೇ ಇರುವ ಕ್ರಿ.ಶ. 1104ರ ಶಾಸನದಿಂದ ತಿಳಿದು ಬರುತ್ತದೆ.[33]

ರಾಜಕುಟುಂಬಗಳಂತೆ ಸಾಮಾನ್ಯ ವರ್ಗದವರಲ್ಲಿಯೂ ಈ ಪದ್ಧತಿಯು ರೂಢಿಯಲ್ಲಿರುವುದನ್ನು ಶಾಸನಗಳು ಘೋಷಿಸುತ್ತವೆ. ಕ್ರಿ.ಶ. 1054ರ ಶಾಸನವೊಂದು ದೇವಸೆಟ್ಟಿ ಎಂಬುವವನಿಗೆ ಗೌರಕ್ಕನನ್ನು ಕೊಟ್ಟು ತಾಂಡ್ಯದ ಪರದವಟ್ಟಗೆಯುದುಂ ಪುಳುಮಾದಲು ಮುಚ್ಚಿವಾಳುಮಂ ಕೊಡುವುದರ ಜೊತೆಗೆ ಬಾವಿಸೆಟ್ಟಿಯರು ಅವಳಿಗೆ ಅರಿವರಿ ಕೊಟ್ಟಂತೆ ಹೇಳಿದೆ.[34]

ವಿವಾಹದ ನಂತರ ಮಗಳು ಅಳಿಯನಿಗೆ ತವರಿನವರು ಮಾವನ ಮನೆಯವರು ಬಿಟ್ಟು ಕೊಡುತ್ತಿದ್ದ ಉಡುಗೊರೆಯ ವಿಷಯವನ್ನು ಶಾಸನಗಳು ಉಲ್ಲೇಖಿಸುತ್ತವೆ. ಮಹಾಪ್ರಧಾನ ದಂಡನಾಯಕ ರುದ್ರ ಭಟ್ಟೋಪಾದ್ಯಾಯರ ಅಗ್ರತನುಜೆ ಕನ್ಯಾರತ್ನ ಮುದ್ದಲದೇವಿಯನ್ನು ಶಂಕರ ಭಟ್ಟೋಪಾಧ್ಯಾಯರಿಗೆ ಕೊಟ್ಟು ಧರ್ಮವಿವಾಹ ಕೈಕೊಳ್ಳುವ ಕಾಲದಲ್ಲಿ ಚಾಲುಕ್ಯ ತ್ರೈಲೋಕ್ಯಮಲ್ಲ ತದನವಾಡಿನಾಡಿನ ಅಂಕುಲಗೆ ಎಂಬ ಗರಾಮವನ್ನು ಸರ್ವಸಮಸ್ಯವಾಗಿ ಬಿಟ್ಟು ಕೊಟ್ಟಿರುವನು.[35] ಈ ಉಡುಗೊರೆಗಳು ಮಾವಂದಿರ ಪ್ರೀತಿಯನ್ನು ಸೂಚಿಸುತ್ತದೆ. ಆರನೆಯ ವಿಕ್ರಮಾದಿತ್ಯನ ಅಳಿಯ ಕದಂಬ ಜಯಕೇಶಿಯು ತನ್ನನ್ನು ಮಾವನ ಗಂಧವಾರಣನೆಂದು ಕರೆದುಕೊಂಡಿದ್ದಾನೆ.[36]

### 2.7.1 ಸ್ತ್ರೀಧನ

ಹೆಣ್ಣು ಮಕ್ಕಳಿಗಾಗಿಯೇ ಮೀಸಲಿಟ್ಟ ಪ್ರತ್ಯೇಕ ಆಸ್ತಿ ಮತ್ತು ಅದರ ಸಂಪೂರ್ಣ ಸ್ವಾಮಿತ್ವವನ್ನು ಮತ್ತು ಅದರ ಉತ್ತರಾಧಿಕಾರವನ್ನು ಮಹಿಳೆಯರಿಗೆ ನೀಡಿದ ಉದಾತ್ತ ನಿಲುವು ಅನೇಕ ಧರ್ಮಶಾಸ್ತ್ರಗಳಲ್ಲಿ ಕಂಡುಬರುತ್ತದೆ. ಹೆಸರೇ ಸೂಚಿಸುವಂತೆ ಸ್ತ್ರೀಧನವೆಂದರೆ ಸ್ತ್ರೀಯರ ಸಂಪೂರ್ಣ ಒಡೆತನ ಹೊಂದಿದ ಸ್ವತ್ತು.

ಸ್ತ್ರೀಧನದ ಉಲ್ಲೇಖ ಮನುಸ್ಮೃತಿಯಲ್ಲೇ ಬರುತ್ತದೆ ಒಂದು ಹೆಣ್ಣಿಗೆ ಮದುವೆಯ ಸಂದರ್ಭದಲ್ಲಿ ಪ್ರೀತಿ ವಾತ್ಸಲ್ಯಪೂರ್ವಕವಾಗಿ ಅವಳ ತಾಯಿ ತಂದೆ ಮತ್ತು ಸಹೋದರರು ನೀಡುವ ಸ್ವತ್ತು, ಉಡುಗೊರೆ ಅವಳ ಸ್ತ್ರೀಧನವಾಗುತ್ತದೆ ಎಂಬುವುದು ಮನುವಿನ ವ್ಯಾಖ್ಯಾನ ಯಜ್ಞವಲ್ಕ್ಯರು ಮನುವಿಗಿಂತಲೂ ಪ್ರಗತಿಶೀಲ ಧೋರಣೆಯನ್ನು ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ ವಧುವಿಗೆ ಮದುವೆಯ ಸಮಯದಲ್ಲಿ ತಂದೆ, ತಾಯಿ, ಸಹೋದರರಷ್ಟೇ ಅಲ್ಲ ಯಾರೇ ಕೊಡುವ ಉಡುಗೊರೆ, ಕಾಣಿಕೆ, ಸ್ವತ್ತು ಮತ್ತು ಮದುವೆಯ ನಂತರ ಕೊಡಲ್ಪಡುವ ಎಲ್ಲ ಉಡುಗೊರೆ ಕಾಣಿಕೆಗಳು ಹಾಗೂ ಗಂಡ ಇನ್ನೊಂದು ಮದುವೆ ಮಾಡಿಕೊಳ್ಳುವ ಸಂದರ್ಭದಲ್ಲಿ ಕೊಡುವ

ಆಸ್ತಿಪಾಸ್ತಿ ಎಲ್ಲವೂ ಸ್ತ್ರೀಧನವಾಗುತ್ತದೆ.[38] ಸಮಕಾಲೀನ ಕೃತಿಯಾದ ವಿಜ್ಞಾನೇಶ್ವರನ ಮಿತಾಕ್ಷರವು ಸ್ತ್ರೀಧನವನ್ನು ಕುರಿತು ಅತ್ಯಂತ ಉದಾರವಾದ ನಿಲುವನ್ನು ತಳೆದಿದ್ದಾನೆ. ಸ್ತ್ರೀಧನ ಎಂಬಪದವು ಕೇವಲ ತಾಂತ್ರಿಕ ಅರ್ಥವನ್ನು ಪಡೆಯದೆ ಅದು ಯಥಾರ್ಥವಾದ ಒಳಾರ್ಥದಿಂದ ಕೂಡಿದೆ. ಈ ಒಳಾರ್ಥವನ್ನು ಗ್ರಹಿಸಬೇಕೇ ಹೊರತು ತಾಂತ್ರಿಕವಾಗಿ ಅದನ್ನು ಪುರಸ್ಕರಿಸುವುದು ಅನುಚಿತ ವಾಗುವುದು. ಸ್ತ್ರೀಧನದ ಆಶಯ ಮತ್ತು ವ್ಯಾಪ್ತಿ ಗಾಢವೂ, ವಿಶಾಲವೂ ಉದಾತ್ತವೂ ಆಗಿದೆ. ಯಜ್ಞವಲ್ಕ್ಯರು, ಕಾತ್ಯಾಯನರು ಸ್ತ್ರೀಧನ ಕುರಿತಾಗಿ ಪ್ರತಿಪಾದಿಸಿದ ಎಲ್ಲ ಅಂಶಗಳನ್ನು ವಿಜ್ಞಾನೇಶ್ವರ ಅನುಮೋದಿಸುತ್ತಾನೆ. ತಾಯಿಯ ನಂತರ ಅದು ಮಗಳಿಗೆ ಸೇರಬೇಕು ಎನ್ನುವ ಉತ್ತರಾಧಿಕಾರದ ಹಕ್ಕನ್ನು ಸಹ ಪ್ರತಿಪಾದಿಸುತ್ತಾನೆ.[39]

ನಾಗರ ಖಂಡದ ನಾಳ್ಗಾವುಂಡನಾಗಿ ಆಡಳಿತವನ್ನು ಮಾಡುತ್ತಿದ್ದ ನಾಗಾರ್ಜುನನು ಕ್ರಿ.ಶ. 912ರಲ್ಲಿ ಯುದ್ಧವೊಂದರಲ್ಲಿ ಮರಣ ಹೊಂದಲು ಬನವಾಸಿಯ ಮಂಡಲಾಧಿಪತಿಯಾಗಿದ್ದ ಕಲಿವಿಟ್ಟರಸನು ತನ್ನ ಆಜ್ಞೆ ಪಾಲಿಸುವಲ್ಲಿ ಅತೀತನಾದ ನಾಗರಖಂಡದ ನಾಳ್ಗಾವುಂಡ ನಾಗಾರ್ಜುನನ ಸ್ಥಾನದಲ್ಲಿ ಅವನ ಪತ್ನಿ ಜಕ್ಕಿಯಬ್ಬೆಯನ್ನು ನಿಲ್ಲಿಸುತ್ತಾನೆ.[40] ಕ್ರಿ.ಶ. 918 ರಲ್ಲಿ ಅವಳ ಮರಣದ ನಂತರ ಅವಳ ಮಗಳು ನಾಗರಖಂಡ ಆಳಿದಂತಿದೆ. ನಿಜ ಪ್ರಿಯಾತ್ಮಜೆಗೆ ಸಂತತಿಯಂ ಕರೆದಿತ್ತು ಎಂಬ ಶಾಸನ[41] ಭಾಗ ಮೇಲಿನ ಮಾತಿಗೆ ಕಾರಣವಾಗಿದೆ. ಆದರೆ ಶಾಸನದಲ್ಲಿ ಜಕ್ಕಿಯಬ್ಬೆಯ ಮಗಳ ಹೆಸರು ದೊರೆಯದಿರುವುದು ನಿರಾಶೆಗೊಳಿಸುತ್ತದೆ.

ಮಾನಸೋಲ್ಲಾಸದಲ್ಲಿ ಮದುವೆಯ ಸಮಯದ ಉಡುಗೊರೆಯನ್ನು ಕುರಿತು ತೃತೀಯ ವಿಂಶತಿಯ 1324 ಮತ್ತು 1325ನೆಯ ಶ್ಲೋಕಗಳಲ್ಲಿ ಮದುವೆಯ ಬಳಿಕ ಸುಂದರವಾದ ವಸ್ತ್ರಗಳನ್ನು, ರತ್ನಾಭರಣಗಳನ್ನು, ಆನೆ, ಕುದುರೆ, ಎಮ್ಮೆ, ಆಕಳುಗಳನ್ನು ದಾಸ ದಾಸಿಯ ವರ್ಗವನ್ನೂ ಮಗನಿಗೆ ಮತ್ತು ಸೊಸೆಗೆ ವಿವಾಹ ಮಹೋತ್ಸವದಲ್ಲಿ ಕೊಡಬೇಕು. ಆನಂತರ ಬ್ರಾಹ್ಮಣರಿಗೆ ವಸ್ತ್ರ ಸುವರ್ಣಭೂಷಣಗಳಿಂದ ಸಂತೋಷವನ್ನುಂಟು ಮಾಡಬೇಕು. ಉಳಿದವರಿಗೆ ಅವರವರ ಯೋಗ್ಯತೆಗೆ ತಕ್ಕಂತೆ ವಸ್ತ್ರಾಭರಣಗಳಿಂದಲೂ ಸುವರ್ಣದಿಂದಲೂ ಸಂತೋಷವನ್ನುಂಟು ಮಾಡಬೇಕು ಎಂದು ಉಲ್ಲೇಖಿಸಿದೆ.[42]

**2.8 ಬಹುಪತ್ನಿತ್ವ**

ಪ್ರಾಚೀನ ಕಾಲದಲ್ಲಿ ಸಮಾಜವು ಬಹುಪತ್ನಿತ್ವವನ್ನು ಒಪ್ಪಿಕೊಂಡು ಬಂದಿತು. ಪ್ರಭುವರ್ಗ ದವರಲ್ಲಿ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತಿದ್ದ ಈ ಪದ್ಧತಿಯು ಸಾಮಾನ್ಯರಲ್ಲಿ ಇರಲಿಲ್ಲ ವೆನ್ನುವಷ್ಟು ವಿರಳವಾಗಿತ್ತು. ಚಕ್ರವರ್ತಿಗಳು ಮತ್ತು ಇತರ ಸಾಮಂತ ಅರಸರಂತೂ ಬಹುಪತ್ನಿ ವಲ್ಲಭರಾಗಿದ್ದರು. ಬಾದಾಮಿ ಚಾಲುಕ್ಯ ಒಂದನೆಯ ಪುಲಕೇಶಿಗೆ ದುರ್ಲಭದೇವಿ ಮತ್ತು ಇಂದುಕಾಂತೆ ಎಂಬ ಇಬ್ಬರು ಪತ್ನಿಯರಿದ್ದರು.[43] ಎರಡನೆಯ ವಿಕ್ರಮಾದಿತ್ಯನು ಹೈಹಯ ವಂಶದ ರಾಜಕುಮಾರಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ ಮಹಾದೇವಿಯರನ್ನು ಮದುವೆ ಯಾಗಿದ್ದನು.[44] ರಾಷ್ಟ್ರಕೂಟರ ಕಾಲದ ಸಮಾಜವು ಬಹುಪತ್ನಿತ್ವವನ್ನು ಒಪ್ಪಿದನ್ನು ಆಗಿನ ಕಾಲದ ಶಾಸನಗಳು ಸಾಹಿತ್ಯ ಕೃತಿಗಳು ಉಲ್ಲೇಖಿಸುತ್ತವೆ. ವಡ್ಡಾರಾಧನೆಯಲ್ಲಿ ಬರುವ ಒಂದು ಕಥೆಯಲ್ಲಿ ನಾಗಸೂರ ಎಂಬುವವನು ಎಂಟು ಜನ ಸ್ತ್ರೀಯರನ್ನು ವಿವಾಹವಾಗಿದ್ದನೆಂದು ಹೇಳುತ್ತದೆ.45 ಎರಡನೆಯ ಕೃಷ್ಣನ ಮಗ ಜಗತ್ತುಂಗನು[46] ಕಲಚೂರಿ ಮನೆತನದ ಲಕ್ಷ್ಮೀ ಹಾಗೂ ಗೋವಿಂದಾಬ್ಬೆ ಯರನ್ನು ವಿವಾಹವಾಗಿದ್ದನು. ಈ ಪರಂಪರೆಯು ಕಲ್ಯಾಣದ ಚಾಲುಕ್ಯರ ಕಾಲದಲ್ಲಿಯೂ ಮುಂದು ವರೆದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಒಂದನೆಯ ಜಗದೇಕಮಲ್ಲ (ಎರಡನೆಯ ಜಯಸಿಂಹ)ನಿಗೆ ಬಿಜ್ಜಲದೇವಿ[47], ಸೋಮಲದೇವಿ[48], ಸುಗ್ಗಲದೆವಿ[49], ನೊಳಂಬಾದೇವಿ[50], ದೇವಮಳ ದೇವಿ (ದೇವಲದೇವಿ)[51], ಬೊನ್ನಾದೇವಿ[52], ಪದ್ಮಲದೇವಿ[53], ಒಂದನೆಯ ಸೋಮೇಶ್ವರನಿಗೆ ಚಂದಲಕಬ್ಬೆ[54], ಮೈಳಲದೇವಿ[55], ಹೊಯ್ಸಳದೇವಿ[56], ಬಾಚಲದೇವಿ[57], ಕೇತಲದೇವಿ[58], ಲಚ್ಚಲದೇವಿ[59], ಚಾಮಲದೇವಿ[60], ಲೀಲಾದೇವಿ[61], ಆರನೆಯ ವಿಕ್ರಮಾದಿತ್ಯನಿಗೆ 20 ಜನ ರಾಣಿಯರಿದ್ದರೆಂದು ಈವರೆಗೆ ಅವನ ಕಾಲದ ಶಾಸನಗಳಿಂದ ತಿಳಿದುಬಂದಿದೆ.[62] ಮೂರನೆಯ ಸೋಮೇಶ್ವರನಿಗೆ ಬಮ್ಮಲದೇವಿ[63], ರಾಜಲದೇವಿ[64] ಎಂಬ ಇಬ್ಬರು ರಾಣಿಯರಿದ್ದರು. ಹೀಗೆ ಪ್ರಭು ವರ್ಗದವರು ಬಹು ಪತ್ನಿ ವಲ್ಲಭರಾಗಿದ್ದುದು ಸ್ಪಷ್ಟವಾಗುತ್ತದೆ.

ಸಾಮಂತರ ಅರಸರು ಹಾಗೂ ಮಹಾಮಂಡಲೇಶ್ವರರು ಇದರಿಂದ ಹೊರತಾಗಿರಲಿಲ್ಲ. ಸಾಂತಳಿಗೆ ಸಾಸಿರವನ್ನು ಚಾಲುಕ್ಯರ ಸಾಮಂತರಾಗಿ ಆಳುತ್ತಿದ್ದ ಸಾಂತಾರಾ ಎರಡನೆಯ ವೀರಸಾಮತರನಿಗೆ ಬಿಜಲದೇವಿ[65], ಆಚಲದೇವಿ[66], ವೀರಮಹಾದೇವಿ[67], ಚಾಗಲದೇವಿ[68] ಎಂಬ ನಾಲ್ಕು ಜನ ಮಡದಿಯರಿದ್ದರು. ಆರನೆಯ ವಿಕ್ರಮಾದಿತ್ಯನ ಪಾದಾಬ್ಜ ಭೃಂಗನಾಗಿ ಮಹಾಮಂಡ ಲೇಶ್ವರ ಹಾನುಗಲ್ಲಿನ ಕದಂಬ ಎರಡನೆಯ ತೈಲಪನಿಗೆ ಪಾಂಡ್ಯ ರಾಜಕುಮಾರಿ ಬಾಚಲದೇವಿ

ಹಾಗೂ ಚಾಮಲದೇವಿಯರು ಇವನ ರಾಣಿಯರಾಗಿದ್ದರು. ರಟ್ಟ ಎರಡನೆಯ ಕಾರ್ತವೀರ್ಯನಿಗೆ ಭಾಗಲದೇವಿ ಮತ್ತು ಮೈಳಲದೇವಿ ಎಂಬ ಇಬ್ಬರು ರಾಣಿಯರಿದ್ದರು.[70] ರಟ್ಟ ನಾಲ್ಕನೆಯ ಕಾರ್ತವೀರ್ಯನಿಗೆ ಏಚಲಾದೇವಿ ಹಾಗೂ ಮಹಾದೇವಿ ಎಂಬ ಇಬ್ಬರು ರಾಣಿಯರಿದ್ದರು.[71] ಕುರುಗೋಡು ಸಿಂದರಸ ಒಂದನೆಯ ರಾಜಮಲ್ಲನಿಗೆ ಮಾಲಕದೇವಿ ಮತ್ತು ಸೋಮಲದೇವಿ ಎಂಬ ಇಬ್ಬರು ರಾಣಿಯರಿದ್ದರು.

ಸಿಂದ ಎರಡನೆಯ ರಾಚಮಲ್ಲನ ಹಡಪವಳ ದಂಡನಾಯಕ ಬೇಚರಸನಿಗೆ ವೈಳಿಯಕ್ಕ ಹಾಗೂ ಮಲ್ಹಾಣಿಯಕ್ಕರೆಂಬ ಇಬ್ಬರು ಮಡದಿಯರಿದ್ದರು.[74] ಇರಿವಳೊಳಂಬ ಘಟೆಯಂಕಕಾರನಿಗೆ ಮಹಾದೇವಿ[75] ಮತ್ತು ದಿವಬ್ಬರಸಿ[76] ಯರೆಂಬ ಪತ್ನಿಯರಿದ್ದರು. ಇವರಲ್ಲದೆ ಇನ್ನಿತರ ಅಧಿಕಾರಿಗಳು ಸಹ ಕಾಮದಂಡನಾಥನಿಗೆ ಕಾಳಲದೇವಿ, ಮಾಳಲದೇವಿಯರೆಂಬ ಇಬ್ಬರು ಮಡದಿಯರಿದ್ದರು.[77] ಪೊತಿಯಮ್ಮನೆಂಬವ ಕಾಳಿಯಬ್ಬೆ, ಮಲ್ಲಯಬ್ಬೆಯರನ್ನು ಮದುವೆಯಾಗಿದ್ದನು.[78] ಗಂಗರಾಜನಿಗೆ ಲಕ್ಷ್ಮೀಮತಿ[79] ಮತ್ತು ನಾಗಲದೇವಿ[80] ದಂಡನಾಯಕಿತಿ ಎಂಬ ಇಬ್ಬರು ಪತ್ನಿಯರಿದ್ದರು. ಧರ್ಮ ಮೃತದಲ್ಲಿಯೂ ಇಬ್ಬರೂ ಮೂವರನ್ನು ಮದುವೆಯಾಗಿ ಸವತಿಯರ ಮಥನ ಸಿಕ್ಕು ಗೋಳಾಡುವ ಪುರುಷನ ಉಲ್ಲೇಖವು ಇದೆ[81]. ರನ್ನನು ಅಜಿತ ಪುರಾಣದಲ್ಲಿ ನಾಗದೇವ ಎನ್ನುವವನು ಅತ್ತಿಮಬ್ಬೆ ಮತ್ತು ಗುಂಡಮಬ್ಬೆ ಎಂಬ ಸಹೋದರಿಯರನ್ನು, ಬಹುಷಃ ಒಂದೇ ಹಸೆಯ ಮೇಲೆ ಮದುವೆ ಮಾಡಿಕೊಂಡಿದ್ದಂತೆ ಹೇಳುತ್ತಾನೆ.

ಹೀಗೆ ಬಹುರಾಣಿಯರಿಂದ ರಾಜರು ವಿವಿಧ ರಾಜಮನೆತನಗಳೊಂದಿಗೆ ಶಾಂತಿಯುತವಾದ ಸಂಬಂಧವನ್ನು ಬೆಳೆಸುವುದಕ್ಕೆ ಅನುಕೂಲವಾಗಿತ್ತು. ರಾಣಿಯರು ಧಾರ್ಮಿಕ ಮನೋಭಾವದವರಾದ ವರಾದುದರಿಂದ ಸಾಮ್ರಾಜ್ಯದಲ್ಲಿ ಧಾರ್ಮಿಕ ಚಟುವಟಿಕೆಗಳು ನಡೆಯುವುದಕ್ಕೂ ಕಾರಣವಾಗಿತ್ತು. ಕೆಲವು ರಾಣಿಯರು ರಾಜನ ವ್ಯಕ್ತಿತ್ವಕ್ಕೆ ಮೆರಗು ನೀಡುವಂತವರೂ ಆಗಿದ್ದರು. ಇನ್ನೂ ಕೆಲವರು ಸವತಿ ಮಾತ್ಸರ್ಯವನ್ನು ತಮ್ಮ ಪ್ರಶಸ್ತಿಗಳಲ್ಲಿ ತೋರಿಸಿಕೊಂಡಿದ್ದಾರೆ.

### 2.9 ದಾಂಪತ್ಯ

ಭಾರತೀಯ ಪರಂಪರೆ ಯಾವಾಗಲೂ ಆದರ್ಶ ದಾಂಪತ್ಯವನ್ನು ಎತ್ತಿ ಹಿಡಿದಿದೆ. ಮನಸಾ ಒಂದು ಗೂಡುವ ಅಭೀಪ್ಸೆ ಮತ್ತು ಒಂದು ಗೂಡಿದ ದಂಪತಿಗಳ ಚಿತ್ರ ವೇದಗಳಲ್ಲಿದೆ.[83]

ಸತಿಪತಿಗಳಿಬ್ಬರೂ ಜೀವನದುದ್ದಕ್ಕೂ ಸಹಯಾತ್ರಿಕರು ಧಾರ್ಮಿಕ ಆಚರಣೆಯಲ್ಲಂತೂ ಅವರು ಕೂಡಿಯೇ ಇರಬೇಕು. ಋಗ್ವೇದ ಸೂಕ್ತಗಳು ದೇವತೆಗಳಿಗೆ ಒಟ್ಟಾಗಿ ಆಹುತಿಗಳನ್ನರ್ಪಿಸುವ ದಂಪತಿಗಳನ್ನು ಅನುಗ್ರಹಿಸುವಂತೆ ಪ್ರಾರ್ಥಿಸುತ್ತದೆ. ಶಿವಶರಣರು "ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂದು ಹೇಳುವುದರ ಮೂಲಕ ಗಂಡಹೆಂಡಿರ ಮನೋಭಾವದಲ್ಲಿ ಹೊಂದಾಣಿಕೆ ಇರಬೇಕಾದುದನ್ನು ಒತ್ತಿ ಹೇಳಿದ್ದಾರೆ. ದಾನವನ್ನು ಪುರುಷನು ತಾನೊಬ್ಬನೇ ಕೊಡದೆ ಹೆಂಡತಿಯ ಸಮ್ಮತಿಯನ್ನು ಇಲ್ಲವೆ ಅವಳೊಡಗೂಡಿ ಕೈಕೊಳ್ಳಬೇಕೆಂದು ಧರ್ಮಶಾಸ್ತ್ರಗಳು ತಿಳಿಸುತ್ತವೆ. ಚಾಲುಕ್ಯ ಅರಸರು ಇದಕ್ಕೆ ಹೊರತಾಗಿರಲಿಲ್ಲ. ಮುತ್ತಿಗೆಯ ಶಾಸನವೊಂದು ವಿಟ್ಟರಸನು ಸತಿ ಕೋಮಲದೇವಿಯೊಳೊಂದಾಗಿ ಧರ್ಮತತ್ವರಚಿತ್ತನಾಗಿದ್ದನ್ನು ಉಲ್ಲೇಖಿಸಿದೆ.[84] ಎಲೆಶಿರೂರ ಶಾಸನದ ಅಗ್ರಭಾಗದಲ್ಲಿ ಕೆತ್ತಲಾದ ಶಿವಲಿಂಗದ ಎಡಬಲಗಳಲ್ಲಿ ಗಂಡ ಹೆಂಡತಿಯ ವಿಗ್ರಹವನ್ನು ಬಿಡಿಸಿ ಲಕ್ಕ್ಮೀದೇವಿಯಂ ಪದ್ಮರಸನುಂ ಸದಾಶಿವನ ಸುತ್ತಿಯಿಸುತ್ತಿದ್ದನಪ್ಪರು[85] ಎಂದು ಬರೆದುದನ್ನೂ ಮುಕ್ಕಾಲು ಪಾಲು ಶಾಸನಗಳು ದಾನಿಗಲನ್ನು ದಂಪತಿ ಸಹಿತ ಹೊಗಳಿರುವುದನ್ನು ಇಲ್ಲಿ ಗಮನಿಸಬೇಕು. ಬಮ್ಮರಸ ಬಾಗಯೆಬ್ಬೆ (ಬಾಚಕಬ್ಬೆ) ಎಂಬ ದಂಪತಿಗಳು ತಾವು ಮಾಡಿಸಿದ ತ್ರಿಕೂಟಾಲಯಕ್ಕೆ ಪೂಜೆ ಪುನಸ್ಕಾರ ನಡೆವಂತೆ ಭೂದಾನ ಬಿಟ್ಟ ವಿಷಯ ಹಂದರಗತ ಶಾಸನ ತಿಳಿಸುತ್ತದೆ.[86]

## 2.10 ವೇಶ್ಯೆಯರು

ಋಗ್ವೇದದಲ್ಲಿ ಗಣಿಕೆಯರೆಂದು ಉಲ್ಲೇಖಗೊಂಡ ವೇಶ್ಯೆಯರ ಧರ್ಮವನ್ನು ಕುರಿತು ಗೌತಮ, ಮನು, ನಾರದ, ಮತ್ಸ್ಯ ಪುರಾಣ ಮುಂತಾದ ಪ್ರಾಚೀನ ಕೃತಿ ಕೃತಿಕಾರರು ಪ್ರಸ್ತಾಪಿಸಿದ್ದಾರೆ.[87] ಪ್ರಾಚೀನ ಶಾಸನಗಳ ಆಧಾರದ ಮೇಲಿಂದ ಡಾ. (ಶ್ರೀಮತಿ) ಚೆನ್ನಕ್ಕ ಎಲಿಗಾರವರು [88]ವ್ಯಕ್ತಿಯೊಬ್ಬನೊಂದಿಗೆ ಇದ್ದ, ದೇವರ ಹೆಸರಿನಲ್ಲಿ ಬಿಟ್ಟ, ಹಣಕ್ಕಾಗಿ ದೇಹ ಮಾರುವ ಇವರನ್ನು ವ್ಯಕ್ತಿಸೂಳೆ, ದೇವಸೂಳೆ ಮತ್ತು ಸಮಾಜಸೂಳೆ ಎಂದು ವರ್ಗೀಕರಿಸಿದ್ದಾರೆ.

## ಅಡಿಟಿಪ್ಪಣಿಗಳು

1) MAR 1936, 55 ಕ್ರಿ.ಶ. 1054
2) ಗೋಗಿ ಹನುಮಾಕ್ಷಿ ಕಲ್ಬುರ್ಗಿ ಜಿಲ್ಲೆಯ ಶಾಸನಗಳು ಪು. ಕ್ರಿ.ಶ. 1077
3) SII IX (I) ಕ್ರಿ.ಶ. 1025
4) ಸಿರನೂರಕರ ಶ್ರೀನಿವಾಸ ವಿಜ್ಞಾನೇಶ್ವರ ಮಿತಾಕ್ಷರ ಪುಟ 57.
5) ಅದೇ
6) ಅದೇ
7) EC VIII Sr 88, 912
8) ಅದೇ VII SK 219 ಕ್ರಿ.ಶ. 918
9) ಕಲ್ಬುರ್ಗಿ ಎಂ.ಎಂ. ಮಾನಸೋಲ್ಲಾಸ ಸಂಪುಟ-1 ಪು.334
10) ಈರಣ್ಣ ಕೆ.ಪಿ. ಬಾದಾಮಿ ಚಾಲುಕ್ಯರ ಸಾಂಸ್ಕೃತಿಕ ಪರಂಪರೆ ಪು.87
11) ಅದೇ
12) Khadabadi B.K. Vaddaradhane A study P.170
13) Desai P.B. A History of Karnataka P.135
14) ರಾಯಚೂರ ಜಿಲ್ಲೆಯ ಶಾಸನಗಳು ಪು.257 ಕ್ರಿ.ಶ. 1031
15) ಅದೇ ಪು.179 ಕ್ರಿ.ಶ. 1028
16) SII XX ಕ್ರಿ.ಶ. 1029
17) ಬಳ್ಳಾರಿ ಜಿಲ್ಲೆಯ ಶಾಸನಗಳು ಪುಟ 59 ಕ್ರಿ.ಶ. 1036
18) ಅದೇ 27 ಕ್ರಿ.ಶ. 1008
19) ಕೊಪ್ಪಳ ಜಿಲ್ಲೆಯ ಶಾಸನಗಳು ಪುಟ 279 ಕ್ರಿ.ಶ. 1024
20) ಅದೇ ಪುಟ 279 ಕ್ರಿ.ಶ. 1024
21) Bombay Gazetteer I Part-II P-438
22) SII XI (i) ಕ್ರಿ.ಶ. 1049
23) EC VII Hn 1 ಕ್ರಿ.ಶ. 1055
24) SII XI (i) 150 ಕ್ರಿ.ಶ. 1102
25) IA XIX 190 ಕ್ರಿ.ಶ. 1054

26) ARIE 1946–47 210 ಕ್ರಿ.ಶ. 1048

27) ಅದೇ 1961–62, 540 ಕ್ರಿ.ಶ. 1058

28) SII XI (ii) 85 ಕ್ರಿ.ಶ. 1050

29) ನಾಗಯ್ಯ ಜಿ.ಎಂ. ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ ಪುಟ 160

30) ಆಂಧ್ರಪ್ರದೇಶದಲ್ಲಿ ಕನ್ನಡ ಶಾಸನಗಳು ಪುಟ 201 ಕ್ರಿ.ಶ. 1179

31) ARIE 1962-63 B.No.746 ಕ್ರಿ.ಶ. 1136

32) ನಾಗರಾಜಯ್ಯ ಹಂಪಾ ಸಾಂತಾರರು ಒಂದು ಅಧ್ಯಯನ ಪುಟ 58

33) ಅದೇ

34) ಅದೇ

35) ಅದೇ

36) I.A. XP 249–55 ಕ್ರಿ.ಶ

37) ಹಂದೂರ ಬಿ.ಆರ್. ಜೈನ ಪರಂಪರೆಗೆ ಬೆಳಗಾವಿ ಪ್ರಾದೇಶಿಕ ಕೊಡುಗೆ ಪು.77

38) ಅದೇ

39) SII IX (i) 77–78 ಕ್ರಿ.ಶ. 1142

40) EI XIV 19 (i) ಕ್ರಿ.ಶ. 1176

41) ಅದೇ XIV (i) ಕ್ರಿ.ಶ. 1181

42) ಅದೇ XVI P 27 ಕ್ರಿ.ಶ. 1010

43) SII IX (i) 179 ಕ್ರಿ.ಶ. 1014

44) ನರಸಿಂಹಾಚಾರ್ಯ ಆರ್. ಶಾಸನ ಪದ್ಯಮಂಜರಿ ಪುಟ 196, 197 EC XI D9 44 ಕ್ರಿ.ಶ. 1181

45) EC VII SK 10, ಕ್ರಿ.ಶ. 1085

46) ಅದೇ II sh 73 ಕ್ರಿ.ಶ. 1118

47) ಅದೇ VBL 124 ಕ್ರಿ.ಶ. 1133

48) ಮಲ್ಲಾಪುರ ಬಿ.ವ್ಹಿ. ನಯಸೇನ ಮತ್ತು ಅವನ ಕೃತಿಗಳು ಪುಟ 273

49) ರಾಮಾನುಜ ಅಯ್ಯಂಗಾರ ಎಂಎ. ಅಜಿತಪುರಾಣ 1–38

50) ಚಕ್ಲಕಾರ್ ಎಚ್.ಎಸ್. ಪ್ರಾಚೀನ ಭಾರತದ ಸಾಮಾಜಿಕ ಜೀವನದ ಕೆಲವು ಮುಖಗಳು (ಅನು) ಅನಂತರಾಮಯ್ಯ ಆರ್.ಎಲ್.ಯುಗಯಾತ್ರಿ ಭಾರತೀಯ ಸಂಸ್ಕೃತಿ ಸಂಪುಟ-9, ಪು.435

51) INK 3, ಕ್ರಿ.ಶ. 1078

52) BKI I (I) 50 ಕ್ರಿ.ಶ. 1138

53) SII XV 45 ಕ್ರಿ.ಶ.

54) ಶ್ರೀಕಂಠಶಾಸ್ತ್ರಿ ಎಸ್. ಭಾರತೀಯ ಸಂಸ್ಕೃತಿ ಪು.205

55) ಎಲಿಗಾರ ಚನ್ನಕ್ಕ ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ ಪು.47

# ಅಧ್ಯಾಯ 3

# ಮಹಿಳೆ ಹಾಗೂ ಆರ್ಥಿಕತೆ ಮತ್ತು ಸಾರ್ವಜನಿಕ ಉಪಯೋಗಿ ಕಾರ್ಯಗಳು

## 3.1 ಮಹಿಳೆ ಹಾಗೂ ಆರ್ಥಿಕತೆ

ಮಹಿಳೆ ಆರ್ಥಿಕ ಅಭಿವೃದ್ಧಿಯಲ್ಲಿಯು ತನ್ನದೇ ಪಾತ್ರವನ್ನು ವಹಿಸುತ್ತಿದ್ದಳು. ಪುರುಷರು ಮಾಡುವ ವೃತ್ತಿಯೊಂದಿಗೆ ಅವರನ್ನು ಸೇರಿಸಿ ಕರೆದಿರುವುದುಂಟು. ರಾಣಿ, ದಂಡನಾಯಕಿತಿ, ಮಹಾಮಂಡಲೇಶ್ವರಿ, ನಾಳ್ಗಾವುಂಡಿ, ಗಾವುಂಡಿ, ನಚ್ಚಿತಿ. ಬ್ರಾಹ್ಮಣಿ ಎಂಬ ಮುಂತಾದ ವಿಶೇಷಣಗಳು ಮಹಿಳೆಯರ ಹೆಸರಿನೊಂದಿಗೆ ಕಂಡುಬಂದರೂ, ಇವು ಪ್ರಧಾನವಾಗಿ ರಾಜ ದಂಡನಾಯಕ, ಮಹಾಮಂಡಲೇಶ್ವರ ನಾಳ್ಗಾವುಂಡ, ಗಾವುಂಡ, ಸೆಟ್ಟಿ, ಬ್ರಾಹ್ಮಣರ ಪತ್ನಿಯರು ಎಂಬುದನ್ನು ಸೂಚಿಸುವುದೇ ಹೊರತು ಈ ಮಹಿಳೆಯರ ವೃತ್ತಿಗಳನ್ನಲ್ಲ. ಚಾಲುಕ್ಯರ ಶಾಸನಗಳಲ್ಲಿ ತೆಲ್ಲಿಗ ಜಕ್ಕಿಯಬ್ಬೆ[1], ಧನಗರ ಕಂಟಿಕಬ್ಬೆ[2] ಎಂಬುವರ ಹೆಸರುಗಳು ಕಂಡುಬಂದರೂ ಇವುಗಳು ಅವರ ಪತಿಯರು ಮಾಡುತ್ತಿದ್ದ ವೃತ್ತಿಗಳೇ ಹೊರತು ಮಹಿಳೆಯರ ಮನೆತನದ ವೃತ್ತಿಗಳಾಗಿರ ಬಹುದು. ಇವರಲ್ಲದೆ, ಇನ್ನೂ ಕೆಲವು ಮಹಿಳೆಯರ ವೃತ್ತಿಗಳು ಉಲ್ಲೇಖಗಳನ್ನು ಕಾಣುತ್ತೇವೆ. ಅದರಲ್ಲೂ ಪಾತ್ರದ ಸಿರಿಯವ್ವೆ[3], ತೊತ್ತು ಮಾಚವ್ವೆ[4], ವಚನ ಸಾಹಿತ್ಯದಲ್ಲಿ ಬರುವ ಸೂಳೆ ಸಂಕವ್ವೆ[5], ಕನ್ನಡಿ ಕಾಯಕದ ರೇವಮ್ಮ[6], ಕೊಟ್ಟಣದ ಸೋಮವ್ವೆ[7], ಕದರಿ ಕಾಯಕದ ಕಾಳವ್ವೆ[8], ಕದಿರರೆಮ್ಮವ್ವೆ[9], ಹಾದರ ಕಾಯಕದ ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮ[10], ಹಾಡುವ ಕಾಮವ್ವೆ[11], ಸೊಂಡಿಯ ಅಕ್ಕೇಶ್ವರ ದೇಗುಲದಲ್ಲಿ ಬಲದ ದೆಸೆಯ ಪಾತ್ರದ ಸೊಳೆ ವಕ್ಕಬ್ಬೆ, ಎಡದೆಸೆಯ ಪಾತರಂಸೂಳೆ ಗಾರ್ಗಬ್ಬೆ[12]. ಹೀಗೆ ಹಲವಾರು ವೃತ್ತಿಯನ್ನು ಮಾಡುತ್ತಿರುವ ಮಹಿಳೆಯರನ್ನು ಶಾಸನಗಳು ಸಾಹಿತ್ಯ ಕೃತಿಗಳು ಉಲ್ಲೇಖಿಸುತ್ತವೆ. ಆದರೆ ಇದರ ವಿವರಗಳು ಮಾತ್ರ ಲಭ್ಯವಾಗುವುದಿಲ್ಲ.

### 3.1.1 ಕೃಷಿ

ಭಾರತವು ಪ್ರಾಚೀನ ಕಾಲದಿಂದಲೂ ಕೃಷಿ ಪ್ರಧಾನವಾದ ರಾಷ್ಟ್ರ. ಕೃಷಿಯೇ ಬಹುಜನರಿಗೆ ಉದ್ಯೋಗವನ್ನು ಒದಗಿಸುವ ಕ್ಷೇತ್ರ ಮಹಿಳೆಯು ಕೃಷಿಯ ಅಭಿವೃದ್ಧಿಗಾಗಿ ನೀರಾವರಿಯ ವ್ಯವಸ್ಥೆಯ ಸಲುವಾಗಿ ಕೆರೆ ಬಾವಿಗಳನ್ನು ಮಾಡಿಸಿರುವುದನ್ನು ಮುಂದೆ ವಿವೇಚಿಸಲಾಗಿದೆ. ಅದು ಅಲ್ಲದೇ ಹಲವಾರು ಮಹಿಳೆಯರು ಭೂದಾನ ಮಾಡಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ.

ಕೊಂಡಿಯ ಅಂಡಪಾಲನ ಮಡದಿ ಲಚ್ಚಿಯಬ್ಬರಸಿ ಬೆಳುವಲನಾಡಿನ ಹೂಲಿನಲ್ಲಿ ಬಸದಿಯೊಂದನ್ನು ನಿರ್ಮಿಸಿ ಅದರ ಖಂಡಸೂಚಿತ ಜೀರ್ಣೋದ್ಧಾರಕ್ಕೆ ಅಲ್ಲಿಯ ಋಷಿಗಳ ಆಹಾರ ದಾನಕ್ಕೆ ಪೂಲಿಯಾರೊಡೆಯ ಪ್ರಮುಖ ಸಾಸಿರ್ವರು ಮಹಾಜನಂಗಳ ಪಾದವನ್ನು ಆರಾಧಿಸಿ ಭೂಮಿಯನ್ನು ಪಡೆದು ಬಾಲಚಂದ್ರ ಭಟ್ಟಾರಕದೇವರ ಪಾದ ತೊಳೆದು ಬಿಟ್ಟಿರುವಳು.[13] ಆರನೆಯ ವಿಕ್ರಮಾದಿತ್ಯನ ರಾಣಿ ಪಿರಿಯ ಕೇತಲದೇವಿಯು ಸಿರುಗುಪ್ಪೆಯ ಕೇತಲೇಶ್ವರ ದೇಗುಲಕ್ಕೆ ದತ್ತಿಬಿಟ್ಟ ಕಾಲದಲ್ಲಿ ದೇವರಗ್ರಾಸನದೊಳು ಉಣ್ಬ ಬ್ರಾಹ್ಮಣರ್ಗೆ ಮತ್ತರಾರು ಸಿರುಗುಪ್ಪೆಯಲು ತೋಟ ಮತ್ತರ... ಗಾಮವೆರಡು ಮನೆಯ ನಿವೇಶನವೆಂಟು ಬಿಟ್ಟು ಕೊಟ್ಟಿರುವಳು.[14] ಚಾಲುಕ್ಯ ದಂಡಾಧಿಪ ರವಿಗ ಚಮೂಪನ ಮಡದಿ ರೆಬ್ಬಲದೇವಿಯು ಹೂವಿನ ಹಡಗಲಿಯಲ್ಲಿ ಕೇಶವಗೇ ಹಾವೊಂದನ್ನು ನಿರ್ಮಿಸಿ ಅದಕ್ಕೆ ವಿಪ್ರ ಕುಟುಂಬಗಳಿಂದ ಪಡೆದ ಭತ್ತದ ಗದ್ದೆ, ಅಡಕೆ ತೋಟವನ್ನು ಬಿಟ್ಟಿರುವಳಲ್ಲದೆ ನಾನಾದೇಶ ದ್ವಿಜಸಂತಾನದ ಸತ್ರಕ್ಕೆ 20 ಮತ್ತರು ಭೂಮಿಯನ್ನು ನೀಡಿ ದಾನವಿನೋದೆ ಎಂಬ ಬಿರುದು ಪಡೆದಿರುವಳು.[15] ಹೀಗೆ ಮಹಿಳೆಯರು ಹಲವಾರು ದೇವಾಲಯಗಳಿಗೆ ಭೂಮಿ ದನ ಮಾಡಿರುವುದನ್ನು ಕಾಣುತ್ತೇವೆ.

ಭೂಮಿಯಲ್ಲದೆ ಅವರು ಹಲವು ಬಾರಿ ಹಣವನ್ನು ದಾನವಾಗಿ ಕೊಟ್ಟಿರುವುದುಂಟು. ಆರನೆಯ ವಿಕ್ರಮಾದಿತ್ಯನ ಪಟ್ಟಮಹಾದೇವಿ ಮಲಯಮತಿಯು ತನ್ನ ಆಳ್ವಿಕೆಯ ಅಗ್ರಹಾರ ತುಂಬಳದ ಮಹಾಜನರಿಗೆ ಧರ್ಮವತ್ತಳೆಯಾಗಿ ವ್ಯಾಖ್ಯಾನದುಪಾಧ್ಯಾಯನಿಗೆ 8 ಗದ್ಯಾಣ, ಪುರಾಣದ ಭಟ್ಟನಿಗೆ 8 ಗದ್ಯಾಣ, ಋಗ್ವೇದ, ಯಜುರ್ವೇದದ ಎರಡು ಖಂಡಿಕೆಯ ಉಪಾಧ್ಯಾಯರಿಗೆ ಹನ್ನೆರಡು ಗದ್ಯಾಣ ಅಗ್ನಿಷ್ಠಾಣೆಯ ಬ್ರಾಹ್ಮಣರಿಗೆ 2 ಗದ್ಯಾಣವನ್ನು ನೀಡಿರುವಳು.[16]

### 3.1.2 ವ್ಯಾಪಾರ

ಮಹಿಳೆಯರು ಕೃಷಿಯ ಅಭಿವೃದ್ಧಿಗೆ ಸಹಾಯ ಸಹಕಾರ ಮಾಡಿರುವಂತೆ ವ್ಯಾಪಾರ ವಾಣಿಜ್ಯ ಕ್ಷೇತ್ರದಲ್ಲಿಯು ತಮ್ಮದೆಯಾದ ಪಾತ್ರವನ್ನು ವಹಿಸಿದ್ದಾರೆ. ಸಾವಿದಲ್ಲಕುಲದ ಸಿರಿದೇವಿಯಕ್ಕ ಧರ್ಮಸಂತೆಯೊಂದನ್ನು ಪ್ರಾರಂಭಿಸಿದಂತೆ ತೋರುತ್ತದೆ.[17]

### 3.1.3 ತೆರಿಗೆಗಳು

ಪ್ರಾಚೀನ ಕಾಲದಲ್ಲಿ ಮಹಿಳೆಯರಿಂದ ಕೆಲವು ತೆರಿಗೆಗಳನ್ನು ಆಕರಿಸುತ್ತಲಿದ್ದುದನ್ನು ಶಾಸನಗಳು ಉಲ್ಲೇಖಿಸುತ್ತದೆ. ಅದರಲ್ಲೂ ಸೊಳೆದೆರೆ, ಕನ್ನಡಿವಣ ದೇವಿದೆರೆ ಮುಂತಾದವು.

### 3.1.4 ಸೊಳೆದೆರೆ

ಸರಕಾರಕ್ಕೆ ಬರುವ ಆದಾಯದಲ್ಲಿ ಇದು ಕೂಡಾ ಒಂದಾಗಿತ್ತು. ಬಹುಶಃ ಸಮಾಜದಲ್ಲಿರುವ ಸೂಳೆಯರ ಮೇಲೆ ಹಾಕುವ ತೆರಿಗೆಯಾಗಿರಬೇಕು. ಕ್ರಿ.ಶ. 1071ರ ಹರಪ್ಪನಹಳ್ಳಿಯ ತಾಲ್ಲೂಕಿನ ಚಿಕ್ಕಮಂಗಳಗೇರಿ ಗ್ರಾಮದ ಸ್ವಯಂ ಭೂಕಲಿದೇವರ ನಂದಾ ದೀವಿಗೆಗೆ ಆ ಊರಿನ ಘಾಣದೆರೆ ಮತ್ತು ಸೊಳೆದರೆಗಳನ್ನು ಬಿಟ್ಟುಕೊಟ್ಟಿರುವರು.[19] ಇದರಿಂದ ಸೂಳೆಯರ ಮೇಲಿಯು ತೆರಿಗೆಯನ್ನು ಹಾಕುತ್ತಿದ್ದರು ಎಂಬುವುದು ಗೊತ್ತಾಗುತ್ತದೆ.

### 3.1.5 ಕನ್ನಡಿವಣ

ಶಾಸನಗಳಲ್ಲಿ 'ಕನ್ನಡಿವಣ' ದೇವಾಲಯದ ಪರಿಚಾರಕ ವರ್ಗ ಸೂಳೆಯರಿಗೆ ಮಾತ್ರ ಅನ್ವಯಿಸಿ ಬರುತ್ತದೆ. ಕ್ರಿ.ಶ. 1074ರ ಶಿಕಾರಿಪುರದ ತಾಲ್ಲೂಕಿನ ಶಾಸನವೊಂದು ಕನ್ನಡಿವರ್ಣದ ಉಲ್ಲೇಖವನ್ನು ಮಾಡುತ್ತದೆ.[20] (ಸೂಳೆಯರಲ್ಲಿಯ ಕನ್ನಡಿವಣಮಂ).

ಹೀಗೆ ಮಹಿಳೆಯರು ಆರ್ಥಿಕ ಅಭಿವೃದ್ಧಿಯಲ್ಲಿಯು ತಮ್ಮದೇ ಆದ ಪಾತ್ರವನ್ನು ನಿರ್ವಹಿಸುತ್ತಿದ್ದರೆಂಬುದನ್ನು ಎಂಬುವುದು ಹಲವಾರು ಶಾಸನ ಉಲ್ಲೇಖಗಳು ಸ್ಪಷ್ಟವಾಗಿ ತಿಳಿಸುತ್ತವೆ.

### 3.1.6 ಉಡುಗೆ ತೊಡುಗೆಗಳು

ಮಾನವನು ತನ್ನ ದೇಹವನ್ನು ಮಳೆ, ಚಳಿಯಿಂದ ರಕ್ಷಿಸಿಕೊಳ್ಳಲು ವಿವಿಧ ನಮೂನೆಯ ಸಾಧನೆಗಳನ್ನು ಉಪಯೋಗಿಸುತ್ತಿರುವುದು ತಿಳಿದು ಬರುತ್ತದೆ. ಪ್ರಾರಂಭದ ಹಂತದಲ್ಲಿ ಮಾನವನು ಎಲೆ ಸುತ್ತಿಕೊಂಡು ಚರ್ಮದಿಂದ ರಕ್ಷಿಸಿಕೊಳ್ಳುತ್ತಾ ಬಂದನು. ನಂತರದ ಕಾಲದಲ್ಲಿ ಮಾನವನು ರಕ್ಷಣೆಗಾಗಿ ಬಟ್ಟೆ ಉಪಯೋಗಿಸಿಕೊಂಡನು. ಹೀಗೆ ಬಟ್ಟೆಯು ಲೌಕಿಕ ಸಂಸ್ಕೃತಿಯ ಪ್ರತೀಕವೆನಿಸಿದೆ. ಉಡುಪುಗಳು ಆಯಾ ಜನರ ಅಭಿರುಚಿಗಳನ್ನು, ಮನೋವಿಲಾಸಗಳನ್ನು ಪ್ರತಿಬಿಂಬಿಸುವುದ

ರೊಂದಿಗೆ, ಕಾಲಮಾನಕ್ಕೆ ಅನುಗುಣವಾಗಿ ಅಲ್ಲದೇ ಶ್ರೀಮಂತ ಬಡವರ ಮಧ್ಯದಲ್ಲಿಯೂ ಹಲವಾರು ರೀತಿಯ ಉಡುಪುಗಳನ್ನು ಕಾಣುತ್ತೇವೆ. ವಸಂತ ಕಾಲದಲ್ಲಿ ತೆಳುವಾದ ಶುಭ್ರವಾದ ಚೀನಾಂಶುಕ ಅಥವಾ ಕಾರ್ಪಾಸು ವಸ್ತ್ರವನ್ನು, ಬೇಸಿಗೆಯಲ್ಲಿ ತೆಳುವಾದ ಬಿಳಿಬಟ್ಟೆಯನ್ನು ಧರಿಸಬೇಕು. ಆದರೆ ಮಳೆಗಾಲದಲ್ಲಿ ವಿವಿಧ ವರ್ಣದ ಬಟ್ಟೆಗಳನ್ನು, ಚಳಿಗಾಲದಲ್ಲಿ ಉಣ್ಣೆಯ ತೆಳುವಾದ ಬಿಳಿಬಟ್ಟೆಗಳನ್ನು ಧರಿಸಬೇಕು ಎಂದು ಮಾನಸೋಲ್ಲಾಸವು ಉಲ್ಲೇಖಿಸುತ್ತದೆ.[21] ನಯಸೇನ ತನ್ನ ಧರ್ಮಾಮೃತದಲ್ಲಿ ಶ್ರೀಮಂತರು ಮತ್ತು ಬಡವರ ಹೆಣ್ಣು ಮಕ್ಕಳು ಉಪಯೋಗಿಸುತ್ತಿರುವ ಉಡುಪುಗಳನ್ನು ಉಲ್ಲೇಖಿಸುತ್ತಾನೆ. ಶ್ರೀಮಂತರು, ರಾಣಿಯರು, ದುಕೂಲ, ಮಡಿಸೀರೆ, ಚೀನಾಂಬರ ಮೊದಲಾದ ಬೆಲೆಯುಳ್ಳ ಸೀರೆಗಳನ್ನು ಉಡುತ್ತಿದ್ದರು.[22] ಬಡವರು ಉಡುತ್ತಿದ್ದ ಸೀರೆಗಳು ನೂಲಿನದಾಗಿದ್ದು, ಅವುಗಳನ್ನು ಕಷ್ಟವಸ್ತ್ರಗಳೆಂದು ಕರೆಯುತ್ತಿದ್ದಂತೆ ತೋರುತ್ತದೆ. (ಅದೇ 12-24) ಕಾಳಿದಾಸನು ತನ್ನ ರಘುವಂಶದಲ್ಲಿ ರಾಜಕುವರನು ಭಿನ್ನಾಣಗಿತ್ತಿಯರ ನಡುಭಾಗದ ಮೇಲಿನ ರೇಷ್ಮೆ ಬಟ್ಟೆಯ ಕಟಿಬಂಧಗಳನ್ನು ಸಡಿಲಿಸುವುದನ್ನು ಮತ್ತೆ ಕಟ್ಟುವುದನ್ನು ಮಾಡುತ್ತ ಪ್ರೇಮಚೇಷ್ಟೆಯಲ್ಲಿ ತೊಡಗಿದುದನ್ನು ಹೃದಯಂಗಮವಾಗಿ ಚಿತ್ರಿಸಿದ್ದಾನೆ.[23]

ಚಾಲುಕ್ಯ ಮಹಿಳೆಯರ ವಸ್ತ್ರ ವೈವಿಧ್ಯವನ್ನು ಅರಿತುಕೊಳ್ಳುವ ಚಾಲುಕ್ಯ ಶಿಲ್ಪಗಳು ಪ್ರಮುಖ ಆಕರಗಳು. ಲಕ್ಕುಂಡಿಯ ಕಾಶಿ ವಿಶ್ವೇಶ್ವರ, ನನ್ನೇಶ್ವರ, ಬ್ರಹ್ಮ ಜಿನಾಲಯ, ಡಂಬಳದ ದೊಡ್ಡಬಸಪ್ಪ ದೇವಾಲಯ, ಗದಗದ ಸರಸ್ವತಿ ದೇವಾಲಯದ ಶಿಲ್ಪಗಳಲ್ಲಿ ಅಭಿವ್ಯಕ್ತವಾಗಿರುವ ವಿವಿಧ ನಮೂನೆಯ ವಸ್ತ್ರಗಳನ್ನು ಕಾಣಬಹುದಾಗಿದೆ. ಗದಗದ ಸರಸ್ವತಿ ದೇವಾಲಯದ ಸರಸ್ವತಿಯ ಶಿಲ್ಪವು ನಕ್ಷತ್ರಾಕಾರದ ಚಿತ್ರಗಳಿಂದ ಅಲಂಕೃತವಾಗಿರುವ ಸೀರೆಯನ್ನುಟ್ಟಿರುವುದು ಕಾಣಬಹುದಾಗಿದೆ.

### 3.2 ಮಹಿಳೆಯರ ಉಡುಪುಗಳು

ಭಾರತೀಯ ನಾರಿ ಅಲಂಕಾರ ಪ್ರಿಯಳು ಅದು ಅವಳ ಹುಟ್ಟುಗುಣವೆಂದು ತೋರುತ್ತದೆ. ಪ್ರಾಚೀನ ಕಾಲದ ಮಹಿಳೆಯರು ತರತರದ ಉಡುಪುಗಳ ಬಗ್ಗೆ ವ್ಯಾಮೋಹವಿದ್ದುದನ್ನು ಶಿಲ್ಪಗಳಲ್ಲಿ ವರ್ಣಚಿತ್ರಗಳಲ್ಲಿ ಗುರುತಿಸಬಹುದು. ಉಡುಪುಗಳ ಬಣ್ಣ, ಆಕಾರ, ಅಳತೆ, ನಕ್ಷೆಗಳಲ್ಲಿ ಹೆಚ್ಚಿನ ವೈವಿಧ್ಯ ಕಂಡುಬರುವುದು ಮಹಿಳೆಯರ ಉಡುಪುಗಳಲ್ಲಿಯೇ. ಸೊಂಟದ ಸುತ್ತ ಬಟ್ಟೆಯೊಂದನ್ನು

ಸುತ್ತಿ ಅದರ ನೆರಿಗೆಗಳು ಕಾಲುಗಳ ನಡುವೆ ಇಲ್ಲವೆ ಪಕ್ಕದಲ್ಲಿ ನೇತಾಡುವಂತೆ ಧರಿಸಲಾಗುತ್ತಿತ್ತು. ಇದನ್ನು ಮೇಖಲೆಯು ಟೊಂಕಕ್ಕೆ ಭದ್ರಪಡಿಸುತ್ತಿತ್ತು. ಪಾದದವರೆಗೆ ಬಾಚಿಕೊಂಡ ಈ ಅಧೋವಸ್ತ್ರವು ಇಂದಿನ ಸೀರೆಯನ್ನು ಬಹುಮಟ್ಟಿಗೆ ಹೋಲುವಂತಹದು. ಚಾಲುಕ್ಯರ ಕಾಲದ ವಿವಿಧ ಬಗೆಯ ನೇಯಿಗೆಯ ಮಾಧ್ಯಮದ ಬಣ್ಣದ ನಕ್ಷೆಯ ಸೀರೆಗಳು ಮೂರ್ತಿ ಶಿಲ್ಪಗಳಲ್ಲಿ ಕಾಣಸಿಗುತ್ತವೆ.

ಸೀರೆಗಳ ನೆರಿಗೆಗಳು ಸೊಂಟದ ಮಧ್ಯದಿಂದ ಇಲ್ಲವೆ ಬದಿಯಿಂದ ಇಳಿಬಿದ್ದಿರುವಂತೆ ತೋರಿಸಲಾಗಿದೆ. ಮಧ್ಯದ ನೆರಿಗೆಗಳನ್ನು ಕಾಲುಗಳ ನಡುವೆ ಹಿಂದಕ್ಕೆ ಒಯ್ದು ಸೊಂಟಕ್ಕೆ ಸಿಕ್ಕಿಸಿ ಕಚ್ಚೆ ಹಾಕುವ ರೂಢಿ ಶ್ರೀಮಂತ ಮಹಿಳೆಯರಲ್ಲಿ ಇಲ್ಲವೆ ರಾಜಮನೆತನದ ಮಹಿಳೆಯರಲ್ಲಿ ಇದ್ದಿತೆಂದು ತೋರುತ್ತದೆ. ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಶಿಲ್ಪವೊಂದರಲ್ಲಿ ಚಾಮರ ಧಾರಿಯಾದ ಮಹಿಳೆಯು ಸೀರೆಯುಟ್ಟಿರುವುದನ್ನು ಸುಂದರವಾಗಿ ಕೆತ್ತಲಾಗಿದೆ. ಅಲ್ಲಿರುವ ಇನ್ನೊಂದು ಶಿಲ್ಪದಲ್ಲಿ ಮಹಿಳೆಯು ಉಟ್ಟಿರುವ ಸೀರೆಯ ರೇಖೆಗಳಿಂದ ಕೂಡಿರುವುದನ್ನು ಕಾಣುತ್ತೇವೆ. ಗದಗದ ಸರಸ್ವತಿ ದೇವಾಲಯದಲ್ಲಿರುವ ಸರಸ್ವತಿಯ ಶಿಲ್ಪದಲ್ಲಿ ಸುಂದರವಾದ ನಕ್ಷತ್ರ ಆಕಾರದ ನಕ್ಷೆಗಳಿರುವ ಸೀರೆಯನ್ನು ಧರಿಸಿರುವುದು ಕಂಡುಬರುತ್ತದೆ. ಲಕ್ಕುಂಡಿಯ ಕಾಶೀ ವಿಶ್ವೇಶ್ವರ ದೇವಾಲಯದ ಮೇಲಿರುವ ಇನ್ನೊಂದು ಶಿಲ್ಪದಲ್ಲಿ ಮಹಿಳೆಯು ರೇಖೆಗಳಿಂದ ಕೂಡಿದ ಸೀರೆಯನ್ನು ಧರಿಸಿದ್ದು ಮಧ್ಯದಲ್ಲಿ ನೆರಿಗೆಗಳನ್ನು ಇಳಿಬಿಟ್ಟಂತೆ ತೋರಿಸಲಾಗಿದೆ.

ಸೀರೆಯಂತೆ ಶಿಲ್ಪಗಳಲ್ಲಿ ಉತ್ತರೀಯಗಳು ಬಹಳ ವಿರಳ. ಸಾಮಾನ್ಯವಾಗಿ ತರುಣಿಯರ ಸ್ತನಗಳು ವಿವಸ್ತ್ರವಾಗಿವೆ. ಗಾಥಸಪ್ತಸತಿಯಲ್ಲಿ ಕುಪ್ಪಸಗಳ ವರ್ಣನೆ ಇದೆ.[24] ಕಾಳಿದಾಸನ ಶಕುಂತಲೆ ಎದೆಗೆ ಬಿಗಿಯುತ್ತಿದ್ದ ವಲ್ಕಲವನ್ನು ಸಡಿಲಿಸಲು ಪ್ರಿಯಂವದೆಯನ್ನು ಕೇಳುತ್ತಾಳೆ.[25] ಮಾನಸೋಲ್ಲಾಸವು ಉತ್ತರೀಯಗಳ ಕುರಿತು ಉಲ್ಲೇಖಿಸುತ್ತದೆ.[26]

### 3.2.1 ಆಭರಣ

ಭಾರತದ ನಾರಿ ಹಳದಿಲೋಹದ ವ್ಯಾಮೋಹಿ ಎನ್ನುವ ಮಾತು ಅವಳು ಆಭರಣ ಪ್ರಿಯಳು ಎನ್ನುವುದರಿಂದ ಗೊತ್ತಾಗುತ್ತದೆ. ಅಲಂಕಾರ ಪ್ರಿಯತೆ ಮಾನವನ ಸಹಜ ಗುಣ, ತಾನು ಇತರರಿಗೆ ಸುಂದರವಾಗಿ ಕಾಣಬೇಕೆಂಬ ಆಸೆಯು ಆಭರಣಗಳ ಅನ್ವೇಷಣೆಗೆ ದಾರಿಮಾಡಿಕೊಟ್ಟಿತೆನ್ನ

ಬಹುದು. ಪ್ರಪಂಚದ ಎಲ್ಲಾ ಸಂಸ್ಕೃತಿಯ ಜನರು ಒಂದಿಲ್ಲೊಂದು ಆಭರಣಗಳನ್ನು ಉಪಯೋಗಿಸಿರುವುದು ಕಂಡುಬರುತ್ತದೆ. ಬೃಹತ್ ಶಿಲಾ ಸಂಸ್ಕೃತಿಯ ಜನರು ಪೋಣಿಸಿದ ಮಣಿಗಳ ಸರಗಳನ್ನು ತೊಡುತ್ತಿದ್ದರು. ಅವು ಅಗೇಟ್, ಕಾನೀನಲಿಯ, ಜಾಸ್ಪರ ಅಪರೂಪವಾಗಿ ಚನೋರ್ರೈಟ್, ಲಪೀಜ್, ಲಜೂಲಿ (ನೀಲ) ಮೊದಲಾದ ಜಾತಿಯ ಕಲ್ಲಿನದಾಗಿದ್ದವು. ಇನ್ನೂ ಶಂಖದಿಂದ, ಮಣ್ಣಿನಿಂದ ಅಪರೂಪವಾಗಿ ಚಿನ್ನದಿಂದಲೂ ಮಾಡಿದ ಮಣಿಗಳ ಸರಗಳನ್ನು ಧರಿಸುತ್ತಿದ್ದರು. ತಲ್ಲೂರಿನಲ್ಲಿ ಆಕಸ್ಮಿಕವಾಗಿ ಸ್ಥಳೀಯರು ಅಗೆದ ಒಂದು ಕಲ್ಗೋರಿಯಲ್ಲಿ ಸುಮಾರು ಶಂಖಗಳು ಇದ್ದವು. ಪ್ರತಿಯೊಂದು ಶಂಖದಲ್ಲಿಯೂ ರಂಧ್ರಗಳಿದ್ದವು. ಆದ್ದರಿಂದ ಇವುಗಳನ್ನು ಪೋಣಿಸಿ ಮಾಲೆಯನ್ನು ಮಾಡಿದ್ದಿರಬೇಕು. ಬ್ರಹ್ಮಗಿರಿಯ ಒಂದು ಕಲ್ಗೋರಿಯ ಚಿನ್ನದ ಮಣಿಗಳು ಕೂಡ ಸಣ್ಣ ಸಣ್ಣ ಕೊಳವೆಯಾಕಾರದಲ್ಲಿವೆ. ಈಗಲೂ ಕೂಡ ಇಂತಹ ಮಣಿಗಳನ್ನು ಗ್ರಾಮಸ್ಥರು ಕೋವಿ ಎಂದು ಕರೆಯುತ್ತಾರೆ.

ಆದ್ದರಿಂದ ಈ ಮಣಿಗಳು ಓರ್ವ ಸ್ತ್ರೀ ಧರಿಸುತ್ತಿದ್ದ ಕೋವಿ ಸರದ್ದಾಗಿರಬೇಕು. ಮಣ್ಣಿನ ಮಣಿಗಳು ಸಾಮಾನ್ಯವಾಗಿ ಅಡಕೆಯಾಕಾರದಲ್ಲಿರುತ್ತಿದ್ದವು. ಇಂತಹ ಮಣ್ಣಿನ ಮಣಿಸರಗಳನ್ನು ತೀರಾ ಸಾಮಾನ್ಯ ಜನರು ಧರಿಸುತ್ತಿದ್ದಿರಬೇಕು. ಮೇಲ್ವರ್ಗದವರು ಚಿನ್ನದ ಬಿಳಿ ರೇಖಾ ಚಿತ್ರದ ಕಾರ್ನೀಲಿಯ ಮಣಿಗಳ ಸರಗಳಿಂದ ಅಲಂಕರಿಸಿಕೊಳ್ಳುತ್ತಿದ್ದಿರಬೇಕು.[27] ಮಾನಸೋಲ್ಲಾಸವು ಭೋಪೋಪಭೋಗ ಎಂಬ ಅಧ್ಯಾಯದಲ್ಲಿ 1048 ರಿಂದ 1132ರ ವರೆಗೆ ಇರುವ ಶ್ಲೋಕಗಳಲ್ಲಿ ರಾಜನು ಮತ್ತು ಇತರರು ಉಪಯೋಗಿಸುವ ಆಭರಣಗಳನ್ನು ಕುರಿತು ಉಲ್ಲೇಖಿಸುತ್ತದೆ. ಅವುಗಳನ್ನು ಬಂಗಾರ, ರತ್ನ, ಬೆಳ್ಳಿ, ಮುಂತಾದ ಲೋಹಗಳಿಂದ ಮಾಡಿರುವುದಾಗಿ ಉಲ್ಲೇಖವಿದೆ. ಅದರಲ್ಲೂ ಚಂದ್ರಕಾಂತ ಏಕಾವಳಿ, ವರ್ಣಸರ, ಬ್ರಹ್ಮಸೂತ್ರ, ಬಂಧುರ, ಅಂಗದ, ಬಾಹುಸಂಧಿ, ದ್ವಿಹೀರಕ, ಅತ್ರೆ, ರವಿಮಂಡಲ, ನಂದ್ಯಾವರ್ತ (ಉಂಗುರ), ಶಕ್ತಿ ಮುದಿಕೆ, ಮುಕ್ತಾಡಕ (ಕರ್ಣಾಭರಣ), ಹಂಸತಿಲಕ (ಚೈತರೆಯಲ್ಲಿ ಧರಿಸುವ ಆಭರಣ), ಪದ್ಮ (ಜಡೆಯ ತುದಿಗೆ ಹಾಕುವುದು), ಚೂಡಿ (ಜಡೆಯ ಆಭರಣ), ಮುಕುಲ (ಕಂಠಾಭರಣ), ಸರಿಕೆ (ಸರಿಗೆ), ಬಾಹುವಲಯ (ಎರಡು ಭುಜ ಭೂಷಣಗಳು), ಡಾಂಚಿದಾಮ (ನಡುಪಟ್ಟಿ), ಪಾದಚೂಡಕ, ಕಟಕ ಪಾದಾಲ, ಪಾದ ಘರ್ಘರಿಕಾ, ರಾಢಕ, ಅಂದುಕ (ಕಾಲಂದುಗೆ), ಮಸ್ತಕಭೂಷಣ, ವಲಕ ಹೀಗೆ ವಿವಿಧ ಆಭರಣಗಳ ಉಲ್ಲೇಖವಿದೆ.[28]

ಅಧ್ಯಯನದ ಅನುಕೂಲಕ್ಕಾಗಿ ಆಭರಣಗಳನ್ನು ಹೀಗೆ ವರ್ಗೀಕರಿಸಿಕೊಳ್ಳಬಹುದು.

1) ಶಿರೋಭೂಷಣಗಳು
2) ನೊಸಲೊಡವೆಗಳು
3) ಕಿವಿಯುಡುಗೆಗಳು
4) ಮೂಗಿನ ಒಡವೆಗಳು
5) ಕೊರಳಡವೆಗಳು
6) ಭುಜದ ಆಭರಣಗಳು
7) ಬಾಹು ಭೂಷಣಗಳು
8) ಉದರಬಂಧಗಳು
9) ಒಡ್ಯಾಣಗಳು
10) ಕಾಲ್ ತೊಡವುಗಳು

**1) ಶಿರೋಭೂಷಣಗಳು**

ಶಿರೋಭೂಷಣಗಳಲ್ಲಿ ಮುಕುಟಗಳು ಪ್ರಮುಖವಾದವುಗಳು. ಇವುಗಳ ಆಕಾರದಲ್ಲಿ ಭಿನ್ನವಾಗಿರುವುದನ್ನು ಶಿಲ್ಪಗಳಲ್ಲಿ ಕಾಣಬಹುದು. ಇವು ಮಣಿ ಮುತ್ತುಗಳಿಂದ ಅಲಂಕೃತವಾಗಿದ್ದು, ಪ್ರಾಯಶಃ ಇವುಗಳನ್ನು ರಾಣಿಯರು, ಶ್ರೀಮಂತ ವರ್ಗದವರು ಉಪಯೋಗಿಸುತ್ತಿದ್ದರು. ಗದಗ ತಾಲ್ಲೂಕಿನ ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಸ್ತಂಭದ ಮೇಲಿರುವ ಸಾಲಭಂಜಿಕೆ ಸ್ತ್ರೀಯರು, ರಸಿಕ, ದಂಪತಿಗಳು ಶಂಕುವಿನಾಶಾಕಾರದ ಮುಕುಟವನ್ನು ಹೊಂದಿರುವುದನ್ನು ಕಾಣಬಹುದು. ಕಾಶೀವಿಶ್ವೇಶ್ವರ ದೇವಾಲಯದ ಸ್ತಂಭದ ಮೇಲಿರುವ ಮೂರು ಜನ ಸಾಲಭಂಜಿಕೆ ಸ್ತ್ರೀಯರು ಕಿರೀಟವನ್ನು ಧರಿಸಿದ್ದು ಅವು ಆಕಾರದಲ್ಲಿ ಭಿನ್ನವಾಗಿವೆ.

ಹೀಗೆ ಶಿರೋಭೂಷಣಗಳು ತಲೆಗೆ ರಕ್ಷಣೆಯನ್ನು ಒದಗಿಸುವುದರ ಜೊತೆಗೆ ಮೊಗದ ಚೆಲುವನ್ನು ಹೆಚ್ಚಿಸಿದವು. ಕೇವಲ ಸೌಂದರ್ಯ ವರ್ಧನೆಯೇ ಉದ್ದೇಶವಾದಾಗ ನೀಳವಾದ ಕೇಶರಾಶಿಯನ್ನೇ ಅಲಂಕಾರದ ಮಾಧ್ಯಮವನ್ನು ಮಾಡಿಕೊಂಡು ಬಗೆಬಗೆಯಾಗಿ ಶೃಂಗರಿಸಿಕೊಂಡರು.

### 3.3 ಮಹಿಳೆಯರ ಕೇಶಾಲಂಕಾರಗಳು

ಚಾಲುಕ್ಯರ ಶಿಲ್ಪಗಳಲ್ಲಿ ಮಹಿಳೆಯರು ವಿವಿಧ ಕೇಶಾಲಂಕಾರಗಳಲ್ಲಿ ಕಾಣಸಿಗುತ್ತಾರೆ. ಇವುಗಳನ್ನೇ ಕುರಿತು ಒಂದು ಅಧ್ಯಯನ ಮಾಡುವಷ್ಟು ವಿಭಿನ್ನತೆಯನ್ನು ಈ ಕೇಶ ವಿನ್ಯಾಸದಲ್ಲಿ ಕಾಣುತ್ತೇವೆ.

1) ಕುಟ್ಟಮುಡಿ (ಧಮ್ಮಿಲ್ಲ) ಕೂದಲನ್ನು ಹಿಂದಕ್ಕೆ ಬಾಚಿಕೊಂಡು ದುಂಡಾದ ತುರುಬು ಕಟ್ಟಿದಾಗ ಅದು ಕಟ್ಟುಮುಡಿ (ಧಮ್ಮಿಲ) ಎನಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಚಾಲುಕ್ಯರ ಶಿಲ್ಪಗಳಲ್ಲಿ ದೊಡ್ಡ ತುರುಬುಗಳೇ ಹೆಚ್ಚು. ಕೆಲವು ತಲೆಯ ಗಾತ್ರಕ್ಕಿಂತ ದೊಡ್ಡದಾಗಿವೆ.

ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದಲ್ಲಿರುವ ದರ್ಪಣ ಸುಂದರಿಯು ಕನ್ನಡಿಯನ್ನು ಕೈಯಲ್ಲಿ ಹಿಡಿದು ತನ್ನ ತಲೆಗೂದಲನ್ನು ಬಾಚಿಕೊಳ್ಳುತ್ತಿರುವ ಶಿಲ್ಪವಿದ್ದು ಅದು ಕೇಶ ವಿನ್ಯಾಸದ ರೂಪವನ್ನು ತೋರಿಸುವಂತದ್ದಾಗಿದೆ. ಕೇಶರಾಶಿಯನ್ನು ಹಿಂದುಗಡೆ ಕಟ್ಟಿ ಅದನ್ನು ಮಣಿಗಳಿಂದ ಅಲಂಕರಿಸಿಕೊಂಡಿರುವುದನ್ನು ಅಲ್ಲಿರುವ ಮತ್ತೊಂದು ಶಿಲ್ಪದಲ್ಲಿ ತೋರಿಸಲಾಗಿದೆ.

ಲಕ್ಕುಂಡಿಯಲ್ಲಿರುವ ಹಲವಾರು ಸ್ತ್ರೀ ಶಿಲ್ಪಗಳ ತಲೆಯ ಮೇಲೆ ಗುಂಗುರು ಗುಂಗುರಾಗಿರುವ ಕೇಶ ವಿನ್ಯಾಸವನ್ನು ಕಾಣಬಹುದು.

#### 3.3.1 ಜಡಿಮುಡಿ

ಲಕ್ಕುಂಡಿಯಲ್ಲಿರುವ ಶಿಲ್ಪವೊಂದರಲ್ಲಿ ಮಹಿಳೆಯೊಬ್ಬಳು ತನ್ನ ಕೂದಲನ್ನು ಹಿಂದಕ್ಕೆ ಬಾಚಿಕೊಂಡು ಕೂದಲನ್ನು ಇಳಿಬಿಟ್ಟಿದ್ದಾಳೆ. ಅದು ಅವಳ ಬೆನ್ನಿನ ಮೇಲೆ ಹರಡಿಕೊಂಡಂತೆ ಕಾಣುತ್ತದೆ. ಅವಳು ಕೈಯಲ್ಲಿ ಲಿಂಗವನ್ನು ಹಿಡಿದುಕೊಂಡು ಪೂಜೆಯಲ್ಲಿ ಮಗ್ನವಾದಂತೆ ತೋರುತ್ತದೆ. ಈ ರೀತಿಯ ಕೇಶಾಲಂಕಾರವು ಸಾಹಿತ್ಯ ಕೃತಿಗಳಲ್ಲಿ ಲಂಬಕೇಶವೆಂದು ವರ್ಣಿತವಾಗಿದೆ.

ನಯಸೇನನು ತನ್ನ ಧರ್ಮಾಮೃತದಲ್ಲಿ ಮಹಿಳೆಯರ ಕೇಶವಿನ್ಯಾಸದ ಬಗ್ಗೆ ಕುರಿತು ಹೇಳಿದ್ದಾನೆ. ಅದರಲ್ಲೂ ಮುಡಿಯಿಲ್ಲದ ಶೃಂಗಾರ ವ್ಯರ್ಥವೆಂದು ಅಂದಿನವರ ಭಾವನೆಯಾಗಿತ್ತು.[29]

ಕೂದಲುಗಳನ್ನು ಪಣಿಗೆಯಿಂದ ಹಿಕ್ಕಿ[30] ಬಗೆಬಗೆಯ ಮಾಟದ ಮುಡಿ ಕಟ್ಟುತ್ತಿದ್ದರು.[31] ಒಮಿಲ್ಮಡಿ, ಸೋಮುರ್ಡಿ, ಪೂಮುಡಿ ಮೊದಲಾದ ಬೇರೆ ಬೇರೆ ಮುಡಿಗಳ ಹೆಸರುಗಳನ್ನು ನಯಸೇನ ಕೊಟ್ಟಿದ್ದಾನೆ.[32]

### 3.3.2 ನೊಸಲೊಡವೆಗಳು

ನೊಸಲೊಡವೆಯು ಕೇಶಾಲಂಕಾರಕ್ಕೆ ಪೂರಕವಾಗಿತ್ತು. ಕಣ್ಣಿನ ಮುಂದೆ ಕೂದಲು ಬೀಳದಂತೆ ಅದನ್ನು ಬಂಧಿಸುತ್ತಿದ್ದರು. ಲಕ್ಕುಂಡಿಯ ಹಲವಾರು ಶಿಲಾಬಂಜಿಕೆಯರ ಶಿಲ್ಪಗಳಲ್ಲಿ ಜಡೆಯೊಂದಿಗೆ ಅಲಂಕೃತರಾದ ಮಹಿಳೆಯರು ಲಲಾಟಪಟ್ಟವನ್ನು ಧರಿಸಿದ್ದಾರೆ. ಈ ನೊಸಲೊಡವೆ ಅಥವಾ ಲಲಾಟಪಟ್ಟವನ್ನು ಸ್ತ್ರೀಯರೂ ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಕೆಲವು ಪುರುಷ ಶಿಲ್ಪಗಳು ಸಹ ಲಲಾಟಪಟ್ಟಿಯನ್ನು ಹೊಂದಿರುವುದನ್ನು ಕಾಣಬಹುದು.

### 3.3.3 ಕರ್ಣಾಭರಣಗಳು

ಚಾಲುಕ್ಯರ ಶಿಲ್ಪಗಳಲ್ಲಿ ವಿವಿಧ ನಮೂನೆಯ ಕಿವಿದುಡಿಗೆಗಳು ಕಂಡುಬರುತ್ತವೆ. ಅವುಗಳನ್ನು ಈ ಕೆಳಗಿನಂತೆ ಉಲ್ಲೇಖಿಸಬಹುದು.

ವೃತ್ತಾಕಾರದ ಲೋಹದ ದೊಡ್ಡದಾದ ಉಂಗುರದಂತಿರುವ ಕಿವಿದುಡಿಗೆಯನ್ನು ಲಕ್ಕುಂಡಿ, ಗದಗ, ಡಂಬಳ, ಅಣ್ಣಿಗೇರಿ, ಮುಂತಾದ ಕಡೆ ಇರುವ ಚಾಲುಕ್ಯರ ಶಿಲ್ಪಗಳಲ್ಲಿ ಕಾಣಬಹುದಾಗಿದೆ. ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದಲ್ಲಿರುವ ಸುಂದರಿಯೊಬ್ಬಳ ಕಿವಿಯಲ್ಲಿ ಗಾಲಿಯಂತಿರುವ ಕರ್ಣಾಭರಣವನ್ನು ಧರಿಸಿದ್ದಾಳೆ. ಅಲ್ಲಿಯೇ ಇರುವ ಇನ್ನೊಬ್ಬ ಸುಂದರಿಯ ಕಿವಿಯಲ್ಲಿಯೂ ಗಾಲಿಯಾಕಾರದ ಆಭರಣವನ್ನು ಧರಿಸಿದ್ದಾಳೆ. ಅಲ್ಲಿಯೇ ಇರುವ ಇನ್ನೊಬ್ಬ ಸುಂದರಿಯ ಕರ್ಣಾಭರಣವು ದುಂಡಗಿನ ಪುಟ್ಟ ಡಬ್ಬಿಯಂತಿರುವ ಬಲು ದೊಡ್ಡದಾದ ಕಿವಿಯೊಡವೆ ಇದೆ. ಕಾಶೀವಿಶ್ವೇಶ್ವರ ದೇವಾಲಯದ ಗೋಡೆಯ ಮೇಲಿರುವ ಶಿಲ್ಪವೊಂದರ ಕಿವಿಯಲ್ಲಿ ಮೇಲಿನ ತುದಿಯಿಂದ ಭುಜದವರೆಗೆ ನೇತು ಬಿದ್ದ ಸರಪಳಿಯಾಕಾರದ ಅಪರೂಪದ ಉಡುಗೆಯೂ ಇದೆ. ಡಂಬಳದ ದೊಡ್ಡ ಬಸಪ್ಪ ದೇವಾಲಯದ ಮುಂದಿರುವ ದೇವಿಯ ವಿಗ್ರಹದ ಕಿವಿಯಲ್ಲಿ ಪುಷ್ಪಕುಂಡಲಿ ಇರುವಂತೆ ತೋರುತ್ತದೆ. ಇದು ಇನ್ನೊಂದು ಬಗೆಯ ಕರ್ಣಾಭರಣವಾಗಿದೆ.

ನಯಸೇನನು ಧರ್ಮಾಮೃತದಲ್ಲಿ ಹೆಣ್ಣು ಮಕ್ಕಳು, ರಾಣಿಯರು ಕಿವಿಯಲ್ಲಿ ಪೊನ್ನೋಲೆ ಅಥವಾ ಪಚ್ಚೋತಿಗಳನ್ನು ಧರಿಸುತ್ತಿದ್ದರು ಎಂದು ಹೇಳಿದ್ದಾನೆ.[33] ಕಿವಿಯ ಶೋಭಿಸುವ ರತ್ನಕುಂಡಲವನ್ನು ಉಲ್ಲೇಖಿಸಿದ್ದಾನೆ.[34]

ಈ ಕಿವಿದೊಡಿಗೆಗಳು ಚಾಲುಕ್ಯೋತ್ತರ ಕಾಲದಲ್ಲಿಯೂ ಬಳಕೆಯಲ್ಲಿದ್ದರು. ಕಿವಿದೊಡಿಗೆಗಳು ಮಹಿಳೆಯರಂತೆ ಪುರುಷರು ಸಹ ಉಪಯೋಗಿಸುತ್ತಿದ್ದುದು ತಿಳಿದು ಬರುತ್ತದೆ. ಆದರೆ ಸಾಮಾನ್ಯವಾಗಿ ಮಹಿಳೆಯರ ಒಡವೆಗಳು ಗಾತ್ರದಲ್ಲಿ ದೊಡ್ಡದಾಗಿರುತ್ತಿದ್ದವು.

### 3.3.4 ಮೂಗಿನ ಒಡವೆ

ಚಾಲುಕ್ಯರ ಯಾವ ಶಿಲ್ಪದಲ್ಲಿಯೂ ಮೂಗಿನ ಒಡವೆಗಳು ಕಂಡುಬರುವುದಿಲ್ಲ. ಮಾನಸೋಲ್ಲಾಸ ಕೃತಿಯಲ್ಲಿಯು ಸಹ ಅದರ ಉಲ್ಲೇಖ ಇಲ್ಲದೇ ಇರುವುದು ಸೋಜಿಗದ ಸಂಗತಿಯಾಗಿದೆ. ಆದರೆ ಲಕ್ಕುಂಡಿಯ ಬ್ರಹ್ಮ ಜಿನಾಲಯದಲ್ಲಿರುವ ಪದ್ಮಾವತಿಯ ಶಿಲ್ಪದ ಮೂಗಿನಲ್ಲಿ ಮೂಗಿನ ಒಡುವೆಯನ್ನು ಇಡಲು ಚಿಕ್ಕದಾದ ರಂಧ್ರ ಇದ್ದು ಅಲ್ಲಲ್ಲಿ ಮೂಗಿನ ಆಭರಣ ಹಾಕಿಸುತ್ತಿದ್ದುದರ ಉಲ್ಲೇಖಗಳು ಕಂಡುಬರುತ್ತವೆ.

### 3.3.5 ಕಂಠಾಭರಣಗಳು

ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಕಂಠಾಭರಣಗಳ ಉಲ್ಲೇಖವು ಹೇರಳವಾಗಿದೆ. ಇದರಿಂದ ಈ ಒಡವೆಗಳ ಜನಪ್ರಿಯತೆ ಸ್ಪಷ್ಟವಾಗುತ್ತದೆ. ಮಹಿಳೆ ಮತ್ತು ಪುರುಷರಿಬ್ಬರೂ ಕಂಠಾ ಭರಣಗಳನ್ನು ಧರಿಸುತ್ತಿದ್ದರು.

ಮಾನಸೋಲ್ಲಾಸವು ತೃತೀಯ ವಿಂಶತಿಯ 1048 ರಿಂದ 1132 ರ ವರೆಗಿನ ಭೂಷೇಪ ಭೋಗ ಎಂಬ ಅಧ್ಯಾಯದಲ್ಲಿ ಹಲವಾರು ಕಂಠಾಭರಣಗಳ ಕುರಿತು ಉಲ್ಲೇಖಿಸುತ್ತದೆ. ಮುಕುಲ ವೆಂಬ ಕಂಠಾಭರಣವನ್ನು ಹೇಳುತ್ತಾ ಅದು ಬೇವಿನ ಹಣ್ಣುಗಳ ಆಕಾರದ ಮುತ್ತುಗಳಿಂದಲೂ ನೀಲ ಮಣಿಗಳಿಂದಲೂ ರಚಿಸಲ್ಪಟ್ಟು, ಗರುಡ ಮಾಣಿಕ್ಯಗಳಿಂದ ಮತ್ತು ಹೀರಕಗಳಿಂದ ಕೂಡಿ ಕೊಂಡಿದ್ದಾಗಿತೆಂದು ಉಲ್ಲೇಖಿಸಿದ್ದಾರೆ.35 ಇನ್ನೊಂದು ಕಂಠಾಭರಣವೆಂದರೆ ಸರಿಕೆ ಕಂಠಗಳ ಅಳತೆಗೆ ಸರಿಯಾಗಿ ನಿರ್ಮಿತವಾದ ಗಲಭೂಷಿತವೇ ಸರಿಕೆ ಅದರ ಹೊರಗೆ ರಚಿತವಾದುದೇ ವಜ್ರಸಂಕುಲಿತ

ಎಂಬ ಆಭರಣ. ಈ ಸರಿಕೆ ಅಥವಾ ಸರಿಗೆ ಎಂಬ ಆಭರಣವನ್ನು ಈಗಲೂ ಉತ್ತರ ಕರ್ನಾಟಕದಲ್ಲಿ ಉಪಯೋಗಿಸುತ್ತಿರುವುದನ್ನು ಕಾಣುತ್ತೇವೆ.

ಶಿಲ್ಪಗಳಲ್ಲಿ ಮುಕ್ತಾವಲಿ, ಹರ್ಷಕ, ಹೇಮಸೂತ್ರ ಎಂಬ ಹಾರಗಳು ಪುರುಷರು ಧರಿಸುವ ಒಡವೆಗಳೆಂದೂ, ಮುತ್ತಿನಹಾರ, ವ್ಯಾಲಪಕ್ತಿ, ಮಂಜರಿ, ರತ್ನಹಾರಗಳು ಸ್ತ್ರೀಯರ ಕಂಠಾಭರಣಗಳೆಂದೂ ನಾಟ್ಯಶಾಸ್ತ್ರವು ಉಲ್ಲೇಖಿಸುತ್ತದೆ. ಚಾಲುಕ್ಯರ ಶಿಲ್ಪಗಳನ್ನು ಅವಲೋಕಿಸಿದರೆ ಒಬ್ಬ ಮಹಿಳೆಯ ಕೊರಳಲ್ಲಿ ಒಂದಕ್ಕಿಂತಲೂ ಹೆಚ್ಚು ಕಂಠಾಭರಣಗಳನ್ನು ಧರಿಸಿವುದು ಲಕ್ಕುಂಡಿ ಯಲ್ಲಿರುವ ಒಂದು ದೇವಿಯ ಶಿಲ್ಪದ ಕೊರಳಲ್ಲಿ ಕಂಡುಬರುತ್ತದೆ. ವಿವಿಧ ಬಗೆಯ ಏಳಕ್ಕಿಂತಲೂ ಹೆಚ್ಚು ಆಭರಣಗಳನ್ನು ಧರಿಸಿರುವುದನ್ನು ಕಾಣುತ್ತೇವೆ.

ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಗರ್ಭಗೃಹದ ಮುಂಭಾಗದ ಸ್ತಂಭಗಳ ಮೇಲಿರುವ ಸ್ತ್ರೀ ಶಿಲ್ಪದ ಕೊರಳಲ್ಲಿ ನಾಲ್ಕು ರೀತಿಯ ಕಂಠಾಭರಣಗಳಿರುವುದು ಕಂಡುಬರುತ್ತದೆ.

ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಹಿಂಭಾಗದ ಗೋಡೆಯಲ್ಲಿರುವ ಶಿಲ್ಪ ವೊಂದರಲ್ಲಿ ಮಹಿಳೆಯು ಎರಡು ರೀತಿಯ ಕಂಠಾಭರಣವನ್ನು ಧರಿಸಿದ್ದು ಅದರಲ್ಲಿ ಒಂದು ಕಾಸಿನಿಂದ ತಯಾರಿಸಿದ್ದಾಗಿದೆ.

### 3.3.6 ಮುತ್ತಿನಹಾರಗಳು

ಮುತ್ತಿನ ಹಾರಗಳನ್ನು ಮಹಿಳೆಯರು ಧರಿಸುತ್ತಿದ್ದರೆಂಬುದು ಶಿಲ್ಪಗಳಿಂದ ತಿಳಿದು ಬರುತ್ತದೆ. ಅವುಗಳಲ್ಲಿ ಅನೇಕ ಪ್ರಕಾರದ ಮುತ್ತಿನ ಹಾರಗಳಿವೆ.

1) ಒಂದೇ ಗಾತ್ರದ ಮುತ್ತುಗಳಿಂದಾದ ಹಾರವನ್ನು ಹಾಕಿಕೊಂಡಿರುವಂತ ಶಿಲ್ಪಗಳು
2) ಮಧ್ಯದಲ್ಲಿ ಅತಿದೊಡ್ಡ ಮತ್ತು ಕ್ರಮೇಣ ಎಡಬಲಗಳಲ್ಲಿ ಸಣ್ಣದಾಗುತ್ತ ಹೋಗುವ ಮುತ್ತಿನ ಸರಗಳು.
3) ಮುತ್ತಿನ ಸರಗಳ ಮಧ್ಯೆ ಪದಕವಿರುವ ಸರಗಳು
4) ಮುತ್ತಿನ ಸರಗಳ ಮಧ್ಯ ಪದಕವಲ್ಲದೇ ಬೇರೆ ವಸ್ತುಗಳಿರುವುದನ್ನು ಕಾಣುತ್ತವೆ.

ಮೇಲಿನ ಹಾರಗಳು ಒಂದೊಂದೇ ಎಳೆಯಿಂದ ಆಗಿವೆ. ಆದ್ದರಿಂದ ಇವೆಲ್ಲವುಗಳನ್ನು ಏಕಾವಳಿಗಳೆಂದು ಕರೆಯುತ್ತಾರೆ.

### 3.3.7 ವೈಕಕ್ಷಕ

ಚನ್ನವೀರನೆಂಬ ಆಭರಣವು ಅಜಂತೆಯ ವರ್ಣಚಿತ್ರಗಳಲ್ಲಿ ಕಂಡು ಬರುತ್ತದೆ. ಇದು ಎದೆಯ ಮೇಲೆ ಎರಡೂ ಹೆಗಲುಗಳಿಂದ ಅಡ್ಡಲಾಗಿ ಇಳಿಬಿಟ್ಟ ಪಟ್ಟಿಗಳಿಂದಾದುದು. ಈ ಆಭರಣವು ಚಾಲುಕ್ಯರ ಶಿಲ್ಪ ಅಥವಾ ವರ್ಣಚಿತ್ರದಲ್ಲಿ ಗೋಚರಿಸುವುದಿಲ್ಲ. ಚನ್ನವೀರವನ್ನು ಮುಂಭಾಗದಲ್ಲಿ ಹೋಲುವ ಹಿಂಭಾಗದಲ್ಲಿ ಹೋಲದ 'ವೈಕಕ್ಷಕ' ಎಂಬ ವಿಶಿಷ್ಟ ಒಡವೆಯು ಬಾದಾಮಿ ಹಾಗೂ ಕಲ್ಯಾಣದ ಚಾಲುಕ್ಯರ ಶಿಲ್ಪಗಳಲ್ಲಿ ವಿಶೇಷವಾಗಿ ಕಾಣಸಿಗುತ್ತದೆ.

ಇದು ಕೇವಲ ಸ್ತ್ರೀಯರು ಧರಿಸುವ ಕೊರಳಹಾರ. ಈ ಒಡವೆಯು ಚಾಲುಕ್ಯರ ವಿಶೇಷತೆಯಾಗಿದೆ. ಎರಡೂ ಹೆಗಲಗಳ ಮೇಲೆ ಜನ್ನಿವರದಂತೆ ಧರಿಸಲಾಗುತ್ತದೆ. ಅವೆರಡೂ ಸರಗಳು ಕೂಡುವಲ್ಲಿ, ಸ್ತನಗಳ ಕೆಳಗೆ ಒಂದು ಪದಕ ಹಾಗೂ ಬೆನ್ನಿನ ಮೇಲೆ ಒಂದು ಪದಕವನ್ನು ಜೋಡಿಸಲಾಗಿರುತ್ತದೆ. ತೊಡೆಗಳವರೆಗೆ ಇಳಿಬಿದ್ದ ಕೊರಳ ಮಾಲೆ, ಇದನ್ನು ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಹೊರಗೋಡೆಯ ಮೇಲಿರುವ ಹಾಗೂ ಒಳಭಾಗ ದಲ್ಲಿರುವ ಗರ್ಭಗೃಹದ ದ್ವಾರಭಾಗದ ಮೇಲಿರುವ ಶಿಲ್ಪಗಳಲ್ಲಿ ಕಾಣಬಹುದು.

### 3.3.8 ಸ್ತನಹಾರ

ಸುದೀರ್ಘವಾದ ಕೊರಳಹಾರವಿದು. ಸ್ತನಗಳ ಮಧ್ಯೆ ಇಳಿಬಿದ್ದು ಪದಕದೊಂದಿಗೆ ಹೊಕ್ಕುಳು ತನಕ ನೇತಾಡುವ ಒಡವೆಯಾಗಿದೆ. ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಹೊರಗೋಡೆಯ ಮೇಲಿರುವ ಮಹಿಳೆಯೊಬ್ಬಳು ಈ ಬಗೆಯ ಸ್ತನಹಾರಗಳಿಂದ ಅಲಂಕೃತ ಳಾಗಿದ್ದಾಳೆ. ಇಂತಹ ಹಲವಾರು ಮಹಿಳೆಯರ ಶಿಲ್ಪಗಳು ಅಲ್ಲಿಯ ದೇವಾಲಯಗಳಲ್ಲಿ ಕಂಡುಬರುತ್ತವೆ.

### 3.3.9 ಸಂಯುಕ್ತ ವೈಕಕ್ಷಕ

ಸ್ತನಹಾರ ಮತ್ತು ವೈಕಕ್ಷಕಗಳ ಸಂಯುಕ್ತ ಕಂಠಾಭರಣವಿದು. ಲಕ್ಕುಂಡಿಯ ಕಾಶೀ ವಿಶ್ವೇಶ್ವರ, ಉಣಕಲ್ಲಿನ ಚಂದ್ರಮೌಳೇಶ್ವರ ಮತ್ತು ಕುರುವತ್ತಿಯ ಮಲ್ಲಿಕಾರ್ಜುನ ದೇವಾಲಯದ

ಅರ್ಧ ಕಂಬಗಳ ಬೋದುಗೆಗಳಿಗೆ ಆನಿಸಿ ಇಟ್ಟಿರುವ ಮದನಿಕೆಯರ ಮೂರ್ತಿಗಳು ಕಲ್ಯಾಣದ ಚಾಲುಕ್ಯರ ಶ್ರೇಷ್ಠ ಮೂರ್ತಿಗಳಾಗಿರುವಂತೆ ಅವರು ಧರಿಸಿರುವ ಆಭರಣಗಳು ಸಹ ಅಷ್ಟೇ ವೈಶಿಷ್ಟ್ಯಮಯವಾಗಿವೆ. ಗದಗದ ಸರಸ್ವತಿ ದೇವಲಯದಲ್ಲಿರುವ ಸರಸ್ವತಿಯ ವಿಗ್ರಹವು ಆಭರಣಗಳಿಂದ ಅಲಂಕೃತಗೊಂಡಿದೆ.

### 3.3.10 ಕಂಠಿಕ

ಕುತ್ತಿಗೆಗೆ ಅಂಟಿಕೊಂಡಿರುವ ಮತ್ತು ಪಟ್ಟಿಯಂತೆ ಕಾಣುವ ಒಡವೆ. ಇದು ಈ ಕೊರಳ ಪಟ್ಟಿಗೆ ಮಣಿಗಳನ್ನು ಜೋಡಿಸಿರುವುದುಂಟು. ಡಂಬಳದ ದೊಡ್ಡ ಬಸಪ್ಪ ದೇವಾಲಯದಲ್ಲಿರುವ ಗರ್ಭಗೃಹದ ದ್ವಾರಸ್ತರದಲ್ಲಿರುವ ಸ್ತ್ರೀ ಶಿಲ್ಪಗಳಲ್ಲಿ ಇಂತಹ ಆಭರಣಗಳನ್ನು ಧರಿಸುವುದನ್ನು ಕಾಣಬಹುದು. ಒಮ್ಮೊಮ್ಮೆ ಕಡಗದಂತೆ ಕಾಣುವ ಕಂಠಿಕೆ ಇರುವುದುಂಟು.

ನಯಸೇನನು ಧರ್ಮಾಮೃತದಲ್ಲಿಯು ಮಹಿಳೆಯರು ಕೊರಳಲ್ಲಿ ಧರಿಸುತ್ತಿದ್ದ ಮುತ್ತಿನ ಹಾರ ಮತ್ತು ಮಣಿಯ ಹಾರಗಳನ್ನು ಉಲ್ಲೇಖಿಸಿದ್ದಾನೆ.[36]

### 3.3.11 ಭುಜದ ಆಭರಣಗಳು

ಕಲ್ಯಾಣದ ಚಾಲುಕ್ಯರ ಶಿಲ್ಪಗಳಲ್ಲಿ ವಿವಿಧ ನಮೂನೆಯ ಭುಜಯ ಆಭರಣಗಳು ಕಂಡು ಬರುತ್ತವೆ. ಬಾದಾಮಿಯ ವಸ್ತು ಸಂಗ್ರಹಾಲಯದಲ್ಲಿಯ ಶಿಲ್ಪವೊಂದರಲ್ಲಿ ಭುಜದ ಆಭರಣ ವಿರುವುದು ಕಂಡುಬರುತ್ತದೆ.

### 3.3.12 ಬಾಹುಭೂಷಣಗಳು

ಬಾಹುಭೂಷಣಗಳನ್ನು ಮೂರು ವಿಧದಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಿದರೆ ಹೆಚ್ಚು ಸೂಕ್ತವಾದುದು ಅವುಗಳೆಂದರೆ

ಅ) ತೋಳ್ಬಂಧಿಗಳು ಆ) ಮುಂಗೈ ಆಭರಣಗಳು ಇ) ಕೈಬೆರಳಿನ ಉಂಗುರಗಳು

#### ಅ) ತೋಳ್ಬಂಧಿಗಳು

ತೋಳಿಗೆ ಸುತ್ತಿಕೊಂಡಿರುವ ಒಡವೆಗಳನ್ನು ತೋಳಬಂಧಿಗಳು ಎಂದು ಕರೆಯುತ್ತಾರೆ. ಇವುಗಳಲ್ಲಿ ನಾಗಮುರಿಗೆ ಅಥವಾ ಸರ್ಪಕೇಯೂರ ಎನ್ನುತ್ತಾರೆ. ಇದನ್ನು ಅಂಗದ ಎಂದೂ

ಕರೆಯುತ್ತಾರೆ.[37] ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಹಿಂಭಾಗದಲ್ಲಿ ಇರುವ ಮಹಿಳೆಯ ಶಿಲ್ಪವೊಂದರಲ್ಲಿ ತೋಳಬಂದಿಯನ್ನು ಧರಿಸಿರುವುದನ್ನು ಕಾಣುತ್ತೇವೆ. ಅದರ ಕೆಳಭಾಗದಲ್ಲಿರುವ ಇನ್ನೊಂದು ಮಹಿಳೆಯ ಶಿಲ್ಪದಲ್ಲಿ ಮೂರು ಸುತ್ತುಗಳಿರುವ ಮುತ್ತಿನ ಆಕಾರದಲ್ಲಿರುವ ಸುಂದರವಾದ ತೋಳಬಂದಿಯನ್ನು ಹಾಕಿಕೊಂಡಿದ್ದಾಳೆ. ಅಲ್ಲಿಯೇ ಇರುವ ಇನ್ನೊಂದು ಶಿಲ್ಪದಲ್ಲಿಯೂ ಮಹಿಳೆಯು ತೋಳಬಂಧಿ ಧರಿಸಿರುವುದನ್ನು ಕಾಣಬಹುದು.

ಈ ತೋಳಬಂಧಿಗಳಲ್ಲಿ ನಾಗಮುರಿಗೆಗಳು ಇದ್ದರೆ ಇನ್ನೂ ಕೆಲವು ಸಲ ಸರಳವಾಗಿ ಇರುವುದನ್ನು ಕಾಣಬಹುದು. ಇವು ಒಂದು, ಎರಡು, ಮೂರು, ನಾಲ್ಕು, ಐದು, ಆರು ಮುರಿಗೆಗಳನ್ನು ಸೂಕ್ಷ್ಮವಾದ ಕೆತ್ತನೆಯ ಪುಷ್ಪ ನಕ್ಷೆಯ ಕೇಯೂರವು ಮುಂತಾದವುಗಳನ್ನು ಚಾಲುಕ್ಯರ ಶಿಲ್ಪಗಳಲ್ಲಿ ಕಾಣಬಹುದು.

**ಆ) ಮುಂಗೈ ಆಭರಣಗಳು**

**ಬಳೆಗಳು**: ಮುಂಗೈ ಆಭರಣಗಳಲ್ಲಿ ಬಳೆಗಳು, ಕಂಕಣಗಳು ಕಡಗಗಳನ್ನು ಸೇರಿಸಬಹುದು. ನಯಸೇನನು ಧರ್ಮಾಮೃತದಲ್ಲಿ ಕಂಕಣ, ವಜ್ರಕಂಕಣ, ಮಣಿಕಂಕಣಗಳನ್ನಿಟ್ಟು ಕೊಳ್ಳುತ್ತಿದ್ದರೆಂದು ಹೇಳಿದ್ದಾನೆ. "ಹಸ್ತರ ಯುಗದೋಳ ಮಣಿಕಂಕಣಂ ಎಯ್ದೆ ಶೋಭಿಸುತ್ತಿರ" ಎಂದು ನಯಸೇನ ಬಣ್ಣಿಸಿದ್ದಾನೆ.[38] ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಕಂಬದಲ್ಲಿರುವ ಶಿಲ್ಪವೊಂದರಲ್ಲಿ ಸ್ತ್ರೀಯು ಬಿಲ್ಲನ್ನು ಹೊಡೆಯುತ್ತಿದ್ದು ಅವಳ ಕೈಯಲ್ಲಿ ಐದು ಬಳೆಗಳಿವೆ. ಅಲ್ಲಿಯೇ ಇರುವ ಇನ್ನೊಂದು ಶಿಲ್ಪದಲ್ಲಿಯೂ ಐದು ಬಳೆಗಳಿರುವುದನ್ನು ಕಾಣಬಹುದು.

**ಕಡಗಗಳು**

ಇವು ಗಾತ್ರದಲ್ಲಿ ಮತ್ತು ವ್ಯಾಸದಲ್ಲಿ ಬಳೆಗಿಂತ ದೊಡ್ಡವು. ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಗೋಡೆಯ ಮೇಲೆ ಇರುವ ಸ್ತ್ರೀ ವಿಗ್ರಹವೊಂದರಲ್ಲಿ ಕೈಯಲ್ಲಿ ಒಂದೇ ಕಡಗ ಇರುವುದನ್ನು ಕಾಣುತ್ತೇವೆ. ಅಲ್ಲಿಯೇ ಇರುವ ಇನ್ನೊಂದು ಶಿಲ್ಪವೊಂದರಲ್ಲಿ ಸ್ತ್ರೀಯ ಕೈಯಲ್ಲಿರುವ ಮುತ್ತಿನಿಂದ ಮಾಡಿರುವಂತೆ ತೋರುತ್ತದೆ. ಇವುಗಳಲ್ಲಿ ಕೆಲವು ಅತ್ಯಂತ ಸೂಕ್ಷ್ಮ ಕೆತ್ತನೆಯಿಂದ, ದೊಡ್ಡ ಮಣಿಗಳಿಂದ ಅಲಂಕಾರಿಕ ಕಡಗಗಳಿರುವುದನ್ನು ಲಕ್ಕುಂಡಿಯ ಕಾಶೀವಿಶ್ವೇಶ್ವರ,

ಕುರುವತ್ತಿಯ ಮಲ್ಲಿಕಾರ್ಜುನ, ನೀಲಗುಂದದ ಭೀಮೇಶ್ವರ ಮುಂತಾದ ಕಡೆಗೆ ಇರುವ ದೇವಾಲಯಗಳ ಕಂಬಗಳ, ದ್ವಾರಗಳಲ್ಲಿರುವ ಶಿಲ್ಪಗಳಲ್ಲಿ ಕಾಣಬಹುದು.

**ಇ) ಕೈಬೆರಳಿನ ಉಂಗುರಗಳು**

ನಯಸೇನನು ಬೆರಳುಗಳಲ್ಲಿ ಒಪ್ಪುವ ರತ್ನಮುದ್ರಿಕೆಯ ಉಂಗುರದ[39] ಉಲ್ಲೇಖವನ್ನು ಮಾಡಿದ್ದಾನೆ. ಚಾಲುಕ್ಯರ ಶಿಲ್ಪಗಳಲ್ಲಿಯೂ ಉಂಗುರಗಳು ಇರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ದೇವಶಿಲ್ಪಗಳಲ್ಲಿ, ಶ್ರೀಮಂತ ವರ್ಗದವರು ಹೆಚ್ಚಾಗಿ ಉಂಗುರಗಳನ್ನು ಧರಿಸುತ್ತಿದ್ದುದು ಕಂಡುಬರುತ್ತದೆ. ಮಾನಸೋಲ್ಲಾಸವು ವಜ್ರಗಳಿಂದಲೂ ಮಧ್ಯದಲ್ಲಿ ಮಾಣಿಕ್ಯ ದಿಂದಲೂ ಕೂಡಿರುವುದು 'ನಂದ್ಯಾವರ್ತ' ವೆಂಬ ಉಂಗುರವೆನಿಸುತ್ತದೆ. ಒಳ್ಳೆ ಬಣ್ಣದಿಂದ ಕೂಡಿ ಕೊಂಡಿರುವ, ಮಾಣಿಕ್ಯದಿಂದ ಶೋಭಿಸುವ, ಮುತ್ತುಗಳಿಂದ ಸುಂದರವಾಗಿರುವ, ಸುಂದರವಾದ ಹವಳಗಳಿಂದ, ಮರಕತಮಣಿಗಳಿಂದ, ಪುಷ್ಪರಾಗದಿಂದ ಮತ್ತು ನೀಲವಜ್ರದಿಂದ ಶೋಭಿಸುತ್ತಿರುವ, ಗೋಮೇದಕರತ್ನದಿಂದಲೂ ವೈಡೂರ್ಯದಿಂದಲೂ ರಚಿತವಾಗಿ ನವಗ್ರಹ ಛಾಯೆಯಿಂದ ಕೂಡಿದ ರತ್ನಗಳಿಂದ ನಿರ್ಮಿತವಾಗಿರುವ, ಶ್ರೇಷ್ಠವಾದ ಉಂಗುರಕ್ಕೆ 'ನವಗ್ರಹ'ವೆಂದು ಕರೆಯುತ್ತಾರೆ. ಬೆರಳಿನಲ್ಲಿ ಧರಿಸಲು ಯೋಗ್ಯವಾದ ಮತ್ತು ವಜ್ರ ಖಚಿತವಾದ ಭೂಷಣಕ್ಕೆ ವಜ್ರವೇಷ್ಟಕ ವೆನ್ನಲಾಗಿದೆ. ಯಾವ ಯಾವ ರತ್ನಗಳಿಂದ ಕೂಡಿಕೊಂಡಿರುವುದೋ ಆಯಾ ರತ್ನವೇಷ್ಟಕವೆಂದು ಕರೆಯಲಾಗುತ್ತದೆ. ನಾನಾ ರೂಪ ವಿಧಾನಗಳಿಂದ ರಚಿತವಾದ ಉಂಗುರಗಳು ಶುಭಕರವಾಗಿರುತ್ತವೆ.

**3.4 ಒಡ್ಯಾಣಗಳು**

ಒಡ್ಯಾಣಗಳು, ನಡುಪಟ್ಟಿಗಳು ಇವು ಅಧೋವಸ್ತ್ರವನ್ನು ಭದ್ರ ಪಡಿಸುತ್ತವೆ ಮತ್ತು ದೇಹದ ಚೆಲುವನ್ನು ಹೆಚ್ಚಿಸುತ್ತವೆ. ಚಾಲುಕ್ಯರ ಶಿಲ್ಪಗಳಲ್ಲಿ, ಮಾನಸೋಲ್ಲಾಸದಲ್ಲಿ ಧರ್ಮಾಮೃತ ದಲ್ಲಿಯೂ ಒಡ್ಯಾಣಗಳ ಉಲ್ಲೇಖ ಬರುತ್ತದೆ. ನಾಲ್ಕು ಅಂಗುಲ ವಿಸ್ತಾರವುಳ್ಳ, ಜಘನವನ್ನು ವೇಷ್ಟನ ಮಾಡುವ, ಸುವರ್ಣರತ್ನ ಖಚಿತವಾದ ದೀರ್ಘಸೂತ್ರಗಳಿಂದ ಕೂಡಿದ ಧ್ವನಿಗೈಯ್ಯುವ ಬಂಗಾರದ ಗೆಜ್ಜೆಗಳಿಂದ ಕೂಡಿದ ಕಟಿಭೂಷಮಕ್ಕೆ ಕಾಂಚಿದಾಮ (ನಡುಪಟ್ಟಿ) ಎಂದು ಹೆಸರು ಎಂದು ಮಾನಸೋಲ್ಲಾಸವು ಉಲ್ಲೇಖಿಸುತ್ತದೆ. ನಾಟ್ಯಶಾಸ್ತ್ರದಲ್ಲಿ ಒಂದು ಎಳೆಯ ದಾರವಿರುವ ಕಾಂಚಿ, ಎಂಟು ಎಳೆಗಳ ಮೇಖಲಾ, ಹದಿನಾರು ಎಳೆಗಳ ರಸನಾ, ಇಪ್ಪತ್ತೈದು ಎಳೆಗಳ ಕಟಪ ಎಂಬ ನಡುಪಟ್ಟಿಗಳ ವಿವರಗಳಿವೆ.[40] ಕಲ್ಯಾಣದ ಚಾಲುಕ್ಯರ ಶಿಲ್ಪಗಳಲ್ಲಿ ಅದರಲ್ಲೂ, ಲಕ್ಕುಂಡಿಯ

ಕಾಶೀವಿಶ್ವೇಶ್ವರ, ಗದಗದ ಸರಸ್ವತಿ, ನೀಲಗುಂದದ ಭೀಮೇಶ್ವರ ಮುಂತಾದ ದೇವಾಲಯಗಳಲ್ಲಿರುವ ಶಿಲ್ಪಗಳಲ್ಲಿ ಕಂಡುಬರುವ ಒಡ್ಯಾಣಗಳ ವೈವಿಧ್ಯವನ್ನು ಹೀಗೆ ಗುರುತಿಸಬಹುದು. ಸಾದಾ ನಡುಪಟ್ಟಿಯನ್ನು ಕೆಲವು ಶಿಲ್ಪಗಳಲ್ಲಿ ಕಂಡರೆ, ಇಂದು ಹಳ್ಳಿಗರು ಉಪಯೋಗಿಸುವ ಡಾಬದಂತಿರುವ ನಡುಪಟ್ಟಿಯನ್ನು ಇನ್ನೂ ಕೆಲವು ಶಿಲ್ಪಗಳಲ್ಲಿ ಕಾಣಬಹುದಾಗಿದೆ. ಲಕ್ಕುಂಡಿಯ ಕಾಶೀವಿಶ್ವೇಶ್ವರ ದೇವಾಲಯದ ಗೋಡೆಗಳ ಮೇಲೆ ಇರುವ ಶಿಲ್ಪವೊಂದರಲ್ಲಿ ಒಡ್ಯಾಣದಲ್ಲಿ ನಡುವೆ ದೊಡ್ಡ ಮಣಿಗಳಿಂದಾದ ಪಟ್ಟಿ ಮೇಲೊಂದು ಕೆಳಗೆ ಒಂದು ಸಣ್ಣ ಮಣಿಗಳ ಸರಗಳು ಅದರ ಮೇಲೆ ಸರಪಳಿಯ ಎರಡು ಎಳೆಗಳು ಹೀಗೆ ಪದಕ್ಕೆ ಜೋಡಿಸಲ್ಪಟ್ಟಿವೆ. ಇಂತಹ ಒಡ್ಯಾಣಗಳ ಪದಕದ ಎಡಬಲಗಳಲ್ಲಿ ಸರಪಳಿಯೊಂದು ಇಂಗ್ಲೀಷ್ ವರ್ಣಮಾಲೆಯ 'ಯು' ಆಕಾರದಲ್ಲಿ ನೇತು ಬಿದ್ದಿರುತ್ತದೆ. ಶಿಲ್ಪ ಸಂಹಿತೆಯು ಇದನ್ನು ಉರುಧಾವುದೆಂದು ಅನಂತರ ಲೋಲಕದಂತೆ ಇಳಿಬಿದ್ದ ಸರಪಳಿಯನ್ನು ಮುಕ್ತದಾಮವೆಂದು ಕರೆದಿದೆ.

### 3.5 ಕಾಲ್ ತೊಡವುಗಳು

ಮಾನಸೋಲ್ಲಾಸವು ಪಾದಭೂಷಣಗಳನ್ನು ಕುರಿತು ಉಲ್ಲೇಖಿಸುತ್ತದೆ. ಅದರಲ್ಲೂ "ಹತ್ತ ಚೂಡಕಮಜ್ರವನ್ನು ಜಂಘಾಕಾಂಡ ಪ್ರಮಾಮಕ್ಕೆ ಹೊಂದುವಂತೆ, ನಾನಾ ರತ್ನಖಚಿತವಾಗಿಸಿದರೆ ಪಾದ ಚೂಡಕವೆಂದು ಕರೆಯುತ್ತಾರೆ. ಮೂರು ಭಾಗಗಳಾಗಿ ವಿಂಗಡಿಸಲಾದ, ಸುವರ್ಣ ನಿರ್ಮಿತವಾದ, ಸಂಧಿ (ಬಗಲು) ದೇಹಕ್ಕೆ ಸರಿಯಾಗಿ ಹೊಂದಿಕೊಳ್ಳುವ, ಕೀಲದಿಂದ ಜೋಡಿಸಲ್ಪಟ್ಟ ನಾಲ್ಕು ಕೋನಗಳಿಂದ ಇಲ್ಲವೆ ಆರು ಕೋನಗಳಿಂದ ಇಲ್ಲವೆ ಎಂಟು ಕೋನಗಳಿಂದ ಕೂಡಿದ ಬಂಗಾರದ ಗೆಜ್ಜೆಗಳನ್ನು ಸಾಲಾಗಿ ಸೇರಿಸಿ ಸುಂದರವಾಗಿ ಕಾಣುವಂತೆ ಮಾಡಿದ ಕಾಂತಿಯಿಂದ ಕೂಡಿಕೊಂಡು ಸಣ್ಣದಾಗಿ ಧ್ವನಿಗೈಯುವ ಹಾಗೂ ನಾನಾ ರತ್ನಗಳಿಂದ ಕೂಡಿದ ಪಾದಭೂಷಣವನ್ನು 'ಕಟಕ'ವೆಂದು ಕರೆಯಲಾಗುವುದು.[41]

ಮೂರು ಇಲ್ಲವೆ ಐದು ಮಾಲೆಗಳನ್ನು ನಾನಾ ಬಗೆಯ ರತ್ನಗಳಿಂದ ನಿರ್ಮಿಸಿ ಅವುಗಳ ಸಂಧಿಗಳನ್ನು ಕೀಲುಗಳಿಂದ ಜೋಡಿಸಿದ್ದಾರೆ ಅದಕ್ಕೆ ಪಾದಾಲವೆಂದು ಕರೆಯುತ್ತಾರೆ.[42] ಬಂಗಾರದಿಂದ ಮಾಡಿದ ಸಣ್ಣ ಗೆಜ್ಜೆಗಳನ್ನು ದಾರದಲ್ಲಿ ಪೋಣಿಸಿದರೆ ಧ್ವನಿಗೈಯುವ ಸುಂದರವಾದ ಆಭರಣಕ್ಕೆ ಪಾದಘಘನರಿಕಾ ಎಂದು ಹೆಸರು.[43] ಆಕಾರಕ್ಕೆ ಸರಿಹೊಂದುವ ವಿವಿಧ ರತ್ನಗಳಿಂದ ನಿರ್ಮಿತವಾಗಿ, ಧ್ವನಿಗೈಯದೆ ಇರುವ ಸುಂದರವಾದ ಆಭರಣಕ್ಕೆ ರಾಢಕವೆಂದು ಹೆಸರು[44], ಆಯತಾಕಾರದ

ವಕ್ರತೆಯಿಂದ ಕೂಡಿ ಬಳೆಯ ಆಕಾರದಲ್ಲಿ ನಿರ್ಮಿತವಾದ ಸ್ತ್ರೀಯರ ಪಾದಭೂಷಣಕ್ಕೆ ಅಂದುಕ (ಕಾಲಂದುಗೆ) ಎಂದು ಕರೆಯಲಾಗುತ್ತದೆ.[45] ಹೀಗೆ ವಿವಿಧ ನಮೂನೆಯ ಕಾಲ್ ತೊಡುವುಗಳನ್ನು ಮಾನಸೋಲ್ಲಾಸವು ಉಲ್ಲೇಖಿಸುತ್ತದೆ. ಚಾಲುಕ್ಯರ ಶಿಲ್ಪಗಳನ್ನು ಅವಲೋಕಿಸಿದರೆ ಸಾದಾ ಕಾಲ್ಗಡಗಗಳು, ಗೆಜ್ಜೆಯ ಸರದಂತೆ ಇರುವ ಕಾಲ್ಗಡಗಗಳು ಇರುವುದನ್ನು ಕಾಣಬಹುದು.

ಹೀಗೆ ಚಾಲುಕ್ಯರ ಕಾಲದ ಸಾಹಿತ್ಯ ಮತ್ತು ಶಿಲ್ಪಗಳಿಂದ ಅಂದು ಸ್ತ್ರೀಯರು ಉಪಯೋಗಿಸುತ್ತಿದ್ದ ವಿವಿಧ ನಮೂನೆಯ ಆಭರಣಗಳನ್ನು ಕಾಣಬಹುದಾಗಿದೆ. ಪುರುಷ ಹಾಗೂ ಸ್ತ್ರೀ ದೇವತೆಗಳಿಗೆ ಹಾಗೂ ಅಂದಿನ ಶ್ರೀ ಸಾಮಾನ್ಯರು ಧರಿಸುವಂತಹ ಒಡವೆಗಳನ್ನು ಗಣಗಳಿಗೆ ತೊಡಿಸಿ ತಮ್ಮ ಕಲಾತೃಷೆಯನ್ನು ಹಿಂಗಿಸಿಕೊಂಡಿದ್ದಾರೆ. ಮೊದಲು ದೇವತೆಗಳನ್ನು ಅನಂತರ ಮಾನವರನ್ನು ಆಭರಣಗಳಿಂದ ಅಲಂಕರಿಸಿದ ಸ್ವರ್ಣಕಾರ ಅನಂತರ ಪ್ರಾಣಿಗಳನ್ನು ಸಹ ಅಲಂಕಾರ ಗೊಳಿಸತೊಡಗಿದ ಇವರ ಕಾಲದ ಆನೆಯ ಶಿಲ್ಪಗಳು ನೊಸಲೊಡವೆ, ಕೊರಳಪಟ್ಟಿ, ಘಂಟಾಮಾಲೆ, ಉದರಬಂಧಗಳಿಂದ ಶೃಂಗರಿಸಲ್ಪಟ್ಟಿರುವುದು ಅಲ್ಲದೆ ಅದರ ಬೆನ್ನಿನ ಮೇಲೆ ಇರುವ ಒಡವೆಗಳು ವಿಶಿಷ್ಟವಾಗಿವೆ. ಆದರೆ ಈ ಆಭರಣಗಳನ್ನು, ಶಿಲ್ಪಗಳನ್ನು ಮಾಡಿ ಸ್ವರ್ಣಕಾರ, ಶಿಲ್ಪಗಳ ಬಗ್ಗೆ ಮಾತ್ರ ಹೆಚ್ಚಿನ ವಿಷಯ ತಿಳಿಯದು.

ಕಲ್ಯಾಣದ ಚಾಲುಕ್ಯರ ಕಾಲದ ಶಿಲ್ಪಗಳಲ್ಲಿ ಅಭಿವ್ಯಕ್ತವಾಗಿರುವ ಆಭರಣ ಉಡುಗೆ, ತೊಡುಗೆಗಳನ್ನೇ ಕುರಿತು ಒಂದು ಸ್ವತಂತ್ರ್ಯವಾದ ಅಧ್ಯಯನವನ್ನು ಮಾಡಿ ಮಹಾಪ್ರಬಂಧವನ್ನು ರಚಿಸುವಷ್ಟು ವಿಷಯವಿರುವುದರಿಂದ ಇಲ್ಲಿ ಕೆಲವು ಉದಾಹರಣೆಗಳನ್ನು ಮಾತ್ರ ನೀಡಲಾಗಿದೆ.

# ಅಡಿಟಿಪ್ಪಣಿಗಳು

1) SII XI (I) Part II ನಂ. 137 ಕ್ರಿ.ಶ. 1091

2) EI XVI 1 ಕ್ರಿ.ಸ. 980

3) SII IX (i) 89 ಕ್ರಿ.ಶ. 1035

4) INKK 4 ಕ್ರಿ.ಸ. 1085

5) ರಾಜೂರ ವೀರಣ್ಣಾ, ಶಿವಶರಣೆಯರ ವಚನಗಳು, ಪು.320

6) ಅದೇ, ಪುಟ 213

7) ಅದೇ, ಪು 217

8) ಅದೇ, ಪು 210

9) ಅದೇ, ಪು 211

10) ಅದೇ, ಪು 360

11) SII IX (I) 89 ಕ್ರಿ.ಶ. 1035

12) EI XV P 49 ಕ್ರಿ.ಶ. 1054

13) SII XV 49 ಕ್ರಿ.ಶ. 1044

14) SII IX (i) 159, ಕ್ರಿ.ಶ. 1092

15) ಅಣಿಗೇರಿ ಎ.ಎಂ. ಶಾಸನ ಸಾಹಿತ್ಯ ಸಂಚಯ

16) SII IX (i) 159 ಕ್ರಿ.ಶ. 1107

17) ನಾರಾಯಣ ಪಿ.ವಿ. ವಚನ, ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು. 105

18) EC XI Dg 105 ಕ್ರಿ.ಶ. 1218

19) SII IX (i) ಕ್ರಿ.ಶ. 1061

20) EC VII SK 295 ಕ್ರಿ.ಶ. 1074

21) ಕಲ್ಬುರ್ಗಿ ಎಂ.ಎಂ. ಮಾನಸೋಲ್ಲಾಸ ಪರಿಚಯ, ಪು1. 60–61

22) ಮಹೇಶವಾಡಿ ಬಿ.ಬಿ. ಮತ್ತು ಪಾಟೀಲ ಎಸ್.ಪಿ.ಧರ್ಮಾಮೃತಂ, ಪುಟ 3–77: 4–137: 7–77

23) ರಘುವಂಶ 19–41

24) ಬಡಿಗೇರ ಪಿ.ಬಿ. ಗಾಥಾ ಸತ್ತಪ ಈ, ಪುಟ 55

25) ಅಧ್ಯರಂಗಾಚಾರ್ಯ, ಕವಿ ಕುಲಗುರು ಕಾಳಿದಾಸ, ಪುಟ 99

26) ಕಲ್ಬುರ್ಗಿ ಎಂ.ಎಂ. ಮಾನಸೋಲ್ಲಾಸ, ಪಉಟ 304

27) ಸುಂದರ ಅ. ಕರ್ನಾಟಕ ಚರಿತ್ರೆ ಸಂಪುಟ 1 ಪು.177

28) ಅದೇ, ಪುಟ 306–315

29) ಮಹೇಶವಾಡಿ ಬಿ.ಬಿ. ಮತ್ತು ಪಾಟೀಲ ಎಸ್.ಪಿ. ಅದೇ 14–160

30) ಅದೇ 7–73

31) ಅದೇ 8–94

32) ಅದೇ 4–137, 8–196

33) ಅದೇ 1–201 – 7–177

34) ಅದೇ 10–254



35) ಕಲ್ಬುರ್ಗಿ ಎಂ.ಎಂ. ಅದೇ, ಪುಟ. 312

36) ಅದೇ, ಧಮಾಮೃತ 8–84, 12–24

37) ಪತ್ತಾರ ಶೀಲಾಕಾಂತ, ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪು.11

38) ಅದೇ ಧರ್ಮಾಮೃತ 4–143, 6–166, 10–254

39) ಅದೇ 4–143, 6–166

40) ಕಲ್ಬುರ್ಗಿ ಎಂ.ಎಂ. ಮಾನಸೋಲ್ಲಾಸ, 3–1083, 1084, 1085, 1086 ಮತ್ತು 1087

41) Manmohan Ghosh (Ed) Natya Sastra Vol-1, P-31-32

42) ಕಲ್ಬುರ್ಗಿ ಎಂ.ಎಂ. ಅದೇ 3–1118–1120

43) ಅದೇ 3–1122

44) ಅದೇ 3–1123

45) ಅದೇ 3–1124

# ಅಧ್ಯಾಯ 4
# ಮಹಿಳೆ ಮತ್ತು ಆಡಳತ

ಚಾಲುಕ್ಯ ಕಾಲದ ಮಹಿಳೆಯು ಆಡಳಿತಕ್ಕಿಂತ ಹೆಚ್ಚಾಗಿ ಧಾರ್ಮಿಕದಲ್ಲಿಯೇ ಭಾಗವಹಿಸಿದ್ದನ್ನು ಕಾಣುತ್ತೇವೆ. ಕೌಟುಂಬಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಕಂಡುಬಂದ ಸುರಕ್ಷತೆಯು ರಾಜಕೀಯ ಕ್ಷೇತ್ರದಲ್ಲಿ ಇರಲಿಲ್ಲ. ಹೀಗಾಗಿ ಅವರ ಆಡಳಿತ ಕ್ಷೇತ್ರವು ಅಷ್ಟೊಂದು ಸುರಕ್ಷಿತವಾದುದಾಗಿರಲಿಲ್ಲ. ಮಹಿಳೆಯು ತನ್ನ ಮಾನವನ್ನು ಕಾಪಾಡಿಕೊಂಡು ದೇಹ ಸಾಮರ್ಥ್ಯದಿಂದ ಈ ರಂಗದಲ್ಲಿರುವುದು ಕಷ್ಟಕರವಾದ ಸಂಗತಿಯಾದುದರಿಂದಲೂ, ಅವಳು ಈ ಕ್ಷೇತ್ರದಿಂದ ದೂರ ಉಳಿದಳು. ಹೀಗಿದ್ದರೂ ಚಾಲುಕ್ಯರ ಕಾಲದ ಮಹಿಳೆಯರಲ್ಲಿ ಕೆಲವರಾದರೂ ಆಡಳಿತದಲ್ಲಿ ಭಾಗವಹಿಸಿ ಆಡಳಿತ ನಿರ್ವಹಣೆ ಮಾಡಿರುವುದನ್ನು ಶಾಸನಗಳು ಘೋಷಿಸುತ್ತವೆ. ಅದರಲ್ಲೂ ಕದಂಬ ಮಯೂರ ವರ್ಮನ ರಾಣಿ ಅಕ್ಕಾದೇವಿಯು ಪ್ರಮುಖವಾದವಳು. ರಣಭೈರವಿ, ಉಚ್ಚಂಡ ಭೈರವಿ, ಗುಣದಬೆಡಂಗಿ ಎಂಬ ಮುಂತಾದ ಬಿರುದುಗಳನ್ನು ಪಡೆದ ಇವಳು ಆಡಳಿತದಲ್ಲಿ ನೇರವಾಗಿ ಭಾಗವಹಿಸಿರುವುದನ್ನು ಕಾಣುತ್ತೇವೆ. ಚಕ್ರವರ್ತಿಗಳು, ಮಂಡಲೇಶ್ವರರು ತಮ್ಮ ಹತ್ತಾರು ಜನ ಮಡದಿಯರ ಉಪಜೀವನಕ್ಕಾಗಿ ಕೆಲವು ಗ್ರಾಮಗಳ, ನಾಡುಗಳ, ಆಡಳಿತವನ್ನು ನಿರ್ವಹಿಸಿಕೊಟ್ಟ, ಪತಿಯ ನಿಧನದ ನಂತರ ಅನಿವಾರ್ಯವಾಗಿ ಆಡಳಿತ ನಡೆಸಿದ ಮಹಿಳೆಯರ ಉದಾಹರಣೆಗಳು ಅಲ್ಲಲ್ಲಿ ಕಂಡುಬರುತ್ತವೆ. ಈ ಆಡಳಿತ ಮಾಡಿರುವ ಮಹಿಳೆಯರನ್ನು ಅಧ್ಯಯನದ ಅನುಕೂಲತೆಗಾಗಿ ಆಡಳಿತ ನಿರ್ವಹಿಸಿದವರು.

1) ಮಹಾಮಂಡಲೇಶ್ವರಿಯಾಗಿ
2) ರಾಣಿಯರು
   ಅ. ರಾಜರೊಂದಿಗಿನ ಆಡಳಿತ     ಆ. ಸ್ವತಂತ್ರ ಆಡಳಿತ
3) ದಂಡನಾಯಕಿಯರಾಗಿ
4) ನಾಳ್ಗಾವುಂಡರಾಗಿ

ಈ ರೀತಿಯಾಗಿ ವಿಭಾಗಿಸಿಕೊಳ್ಳಲಾಗಿದೆ.

### 4.1 ಮಹಾಮಂಡಲೇಶ್ವರಿಯಾಗಿ

ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಮಹಿಳೆಯೊಬ್ಬಳು ಮಹಾಮಂಡಲೇಶ್ವರಿಯಾಗಿ ಆಳಿದ ಉಲ್ಲೇಖವನ್ನು ಕ್ರಿ.ಶ. 1116ರ ಆದಂಪುರದ ಕ್ರಿ.ಶ. 1116ರ ಶಾಸನವು ಮಾಡುತ್ತದೆ.[1]

ಆರನೆಯ ವಿಕ್ರಮಾದಿತ್ಯನ ಬಾಣಸವೆರ್ಗಡೆ ದಂಡನಾಯಕ ಅನಂತಪಾಳಯ್ಯಗಳು, ಪೆರ್ಗಡೆ ಸಿರಿಪತಿನಯಕ, ಮಹಾಮಂಡಲೇಶ್ವರಿ ರೆಬ್ಬಲದೇವಿ ಲ್ಲರಸ, ಕೊಳಿಗೆಯ ಸಮಸ್ತ ಪ್ರಭುಗಳು ಸೇರಿ ಮೂಲಸ್ಥಾನದ ದೇವರಿಗೆ ಧೂಪ, ದೀಪ, ನೈವೇದ್ಯಕ್ಕಾಗಿ ಹಣವನ್ನು ದಾನ ಕೊಡುತ್ತಾರೆ. ಕ್ರಿ.ಶ. 1113ರ ಸಂಗ್ರೋಳಿಯ ಶಾಸನದಲ್ಲಿಯೂ ಈಕೆಯ ಉಲ್ಲೇಖ ಬರುತ್ತದೆ.[2] ಕ್ರಿ.ಶ. 1113ರಲ್ಲಿ ಅವಳು ಸೂರ್ಯಗ್ರಹಣದ ನಿಮಿತ್ತ ಸಬ್ಬೇಶ್ವರ ದೇವರಿಗೆ ಶ್ರೀಮತು ರೆಬ್ಬಲದೇವಿ ತಮ್ಮ ಮನೆಯ (ಮನ್ನೆಯ) ಸೌಮ್ಯದರುಮಾಯಂ ಬಿಡುತ್ತಾಳೆ. ಭಿಮ್ರಾಳದ ಕ್ರಿ.ಶ. 1122ರ ಶಾಸನದಲ್ಲಿ ಕಲಿ ಚೋರನವಧು ರೆಬ್ಬಲದೇವಿ ಶಿವಸ್ವಯಂಭುವಂ ಸ್ಥಾಪಿಸಿ ಕೋಮಳೆ ನಾಗರಹಾಳಂ ದ್ವಿಜಕುಳೋತ್ಮ ಬ್ರಹ್ಮಪುರಿಗೆ ಭೂಮಿಯನಿತ್ತಳ್" ಎಂದು ಹೇಳಿದೆ.[3] ಇದರಿಂದ ಈಕೆಯ ಕಲಿಚೋರನ ಹೆಂಡತಿ ಎಂದು ತಿಳಿದು ಬರುತ್ತದೆ. ಮಹಾಮಂಡಲೇಶ್ವರನ ಹೆಂಡತಿಯಾಗಿರುವುದರಿಂದ ಅಲಂಕಾರಿಕವಾಗಿ ಮಹಾಮಂಡಲೇಶ್ವರ ಎಂದು ಹೇಳಿರಬಹುದೇ? ಎಂಬ ಸಂದೇಹವು ಬರದೇ ಇರದು. ಈಕೆಯ ಪತಿ ಕ್ರಿ.ಶ. 1113ರ ಸುಮಾರಿಗಾಗಲೇ ಮರಣ ಹೊಂದಿರಬೇಕು. ಅನಂತರ ರೆಬ್ಬಲದೇವಿಯು ಅಧಿಕಾರವನ್ನು ವಹಿಸಿಕೊಂಡಿರಬೇಕು. ಏಕೆಂದರೆ ಕ್ರಿ.ಶ. 1116ರ ಅದಂಪುರ ಶಾಸನದಲ್ಲಿ ದಾನ ಬಿಡುವಾಗ ಈಕೆ ಹಾಗೂ ಇತರ ಅಧಿಕಾರಿಗಳು ಜೊತೆಯಲ್ಲಿ ಉಲ್ಲೇಖವಿದೆಯೋ ವಿನಃ ಅವಳ ಪತಿ ಕಲಿಚೋರನ ಉಲ್ಲೇಖವು ಇಲ್ಲದೇ ಇರುವುದು ಗಮನಿಸಿದರೆ ಇದು ತಿಳಿಯುತ್ತದೆ.

### 4.2 ರಾಣಿಯರು

'ರಾಜ ದೇವರ ಸಮಾನ' ಅವನ ಪದವಿಯು ದೇವನಿಂದ ನಿರೂಪಿಸಲ್ಪಟ್ಟದ್ದು ಎಂದು ಪ್ರಾಚೀನರು ನಂಬಿದ್ದರು. ಇದೇ ಮಾತನ್ನು ಪ್ರಾಚೀನ ಗ್ರಂಥಗಳಾದ ಕೌಟಿಲ್ಯನ ಅರ್ಥಶಾಸ್ತ್ರ ಮನುಧರ್ಮ ಶಾಸ್ತ್ರಗಳು ಸಮಕಾಲೀನ ಕೃತಿ ಮಾನಸೋಲ್ಲಾಸದಲ್ಲಿಯು ಈ ಮಾತನ್ನು ಹೇಳಿದೆ. ರಾಜನ ಅರ್ಧಾಂಗಿಯಾಗಿದ್ದ ರಾಣಿಗೂ ಆಡಳಿತದಲ್ಲಿ ಸಮಪಾಲು, ಪರಮಗೌರವ ರಾಜನ ಅರ್ಥ, ಕಾಮ, ಮೋಕ್ಷಗಳಲ್ಲಿ ಅವಳೂ ಸಹಭಾಗಿನಿ. ಪ್ರಜೆಗಳ ದೃಷ್ಟಿಯಲ್ಲಿ ಮಾತೃಸ್ವರೂಪಿಣಿ. ಹೀಗೆ ಆಡಳಿತದಲ್ಲಿ ಭಾಗವಹಿಸಿದ ರಾಣಿಯರಲ್ಲಿ ಪತಿಯೊಂದಿಗೆ ಆಡಳಿತ ಮಾಡಿದವರು ಮತ್ತು ಸ್ವತಂತ್ರವಾಗಿ ಆಡಳಿತ ಮಾಡಿದವರು ಎಂದು ಎರಡು ಭಾಗಗಳನ್ನಾಗಿ ಮಾಡಿಕೊಂಡು ಅಭ್ಯಸಿಸಲಾಗಿದೆ. ಸ್ವತಂತ್ರವಾಗಿ ಆಳಿದ ರಾಣಿಯರು ಹೆಚ್ಚಾಗಿ ಅಗ್ರಹಾರ ಇಲ್ಲವೆ ಅವರ ಉಪಜೀವನಕ್ಕಾಗಿ ಕೊಟ್ಟ ಬಿಡಿಯಾದ ಭತ್ತ ಗ್ರಾಮಗಳನ್ನು ಮಾತ್ರ ಆಳುತ್ತಿದ್ದರು. ಶಾಸನಗಳಲ್ಲಿ ರಾಣಿಯರ ಪ್ರಶಸ್ತಿಗಳನ್ನು ಗಮನಿಸಿದರೆ ಇದು ಅಭಿವ್ಯಕ್ತವಾಗುತ್ತದೆ.

ಒಂದನೆಯ ಸೋಮೇಶ್ವರನ ರಾಣಿ ಚಾಮಲದೇವಿಯನ್ನೂ ಕ್ರಿ.ಶ. 1058ರ ಬಲ್ಲಟ್ಟಿಗೆ ಶಾಸನವು[4] "ಸ್ವಸ್ತನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗಭಾಗಿನಿ, ಕಳಹಂಸಗಾಮಿನಿ, ಗೋತ್ರಪವಿತ್ರೆ, ವಿಮಳಚರಿತ್ರೆ, ಪಾತ್ರಚೂಡಾಮಣಿ, ಸುಜನರಕ್ಷಾಮಣಿ, ಚಿತ್ರವಿದ್ಯಾಧರಿ, ಸಕಲ ಕಲಾಧರಿ, ಮಲೆಯ ಬೆಡಂಗಿ, ಬ್ರಹ್ಮನಣುಗಿಯಾಶ್ರಿತ ಜನ ಕಾಮಧೇನು, ಕಲಿಯುಗ ಸೀತೆ, ಪರಹಿತ ಗಿರಿಜಾತೆ, ಶ್ರೀಮತ್ತೈಲೋಕ್ಯ ಮಲ್ಲದೇವ, ವಿಶಾಲವಕ್ಷಸ್ಥಳ, ನಿವಾಸಿಯರಪ್ಪ ಶ್ರೀಮಚ್ಛಾವಲದೇವಿಯ ಮಲೆಯ ನೆಲೆವೀಡಿನೋಳ" ಎಂದು ಹೇಳಿದರೆ,

ಇಂಗಳಗಿಯ[5] ಶಾಸನವೊಂದು ಆರನೆಯ ವಿಕ್ರಮಾದಿತ್ಯನ ಮಡದಿ ಜಾಕಲದೇವಿಯನ್ನು "ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ, ಸಹಸ್ರಫಲಭೋಗಭಾಗಿನಿ, ಸಕಲದೀನಾನಾಥ ಮನೆಸ್ಯನ್ತ ರ್ಪಣೋದ್ಯೋಗಿನಿಸ ಮಸ್ತಾನ್ತರನಿತಂಬಿನಿ ಕದಂಬ ಚೂಡಾಮಣಿ, ಚತುರ್ವಿಧಧಾನ ಚಿಂತಾಮಣಿ, ರಂಭಾವಿಳಾಸೋಪಹಸಿತ ಲನ್ಮೂರ್ತಿದಿನ್ವಳಯ, ವಿಲಾಸಿತೋಜ್ವಳಕೀರ್ತಿ, ಕರಿಕಾಲಪಾರ್ಬತಿ ಅಭಿನವ ಸರಸ್ವತಿ, ರಾಯಪೇಟೋವಶೀಕರಣ, ಕರಣವಿದ್ಯಾಧರಿ, ಸಕಲಕಲಾಧರಿ, ಸೀತಾಧ್ಯನೇಕ ಮಹಾಸತಿ, ಜನಪತಿ ಬೃತಾಚಾರ, ಶೀಲೋದಾರ ವರ್ಣನಕಥಾಪ್ರಸಂಗೆ ಜಿನಗನ್ಧೋದಕ ಪವಿತ್ರ ಕೃತೋತ್ತಮಾಂಗಿ ಶ್ರೀಮರ್ಹತಪರಮೇಶ್ವರ ಚಾರುಚರಣಾರ್ಚನ ವಿನೋದೆ ಮೃಗಮದಾಮೋದೆ ಸಹಜಬೇಡಂಗಿ ತಿಕ್ಕನಣುಂಗಿ ಶ್ರೀಮತ್ರಿಭುವನಮಲ್ಲ ದೇವವಿಶಾಲವಕ್ಷಸ್ಥಳವಾಸಿನಿಯರಪ್ಪ ಶ್ರೀಮಜ್ಜಾಕಲದೇವಿಯರು" ಎಂದು ಉಲ್ಲೇಖಿಸಲಾಗಿದೆ.

ಆರನೆಯ ವಿಕ್ರಮಾದಿತ್ಯನ ಇನ್ನೊಬ್ಬ ರಾಣಿ ಪದ್ಮಲದೇವಿಯನ್ನು ಕ್ರಿ.ಶ. 1116ರ ಗಂಗಾಪುರದ ಶಾಸನವೊಂದು 195 ಕ್ರಿ.ಶ. 1116) ಸ್ವಸ್ತಿಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಲಭೋಗಭಾಗಿನೀ ದ್ವಿತೀಯ ಲಕ್ಷ್ಮೀಸಮಾನೆ ಕಲಹಂಸಯಾನೆ ಅಗಣ್ಯ ಪುಣ್ಯ ಲಾವಣ್ಯಲೀಲಾಲಂಕೃತ ಪರಿವಾರ ಕಲ್ಪಲತೆ ಅರ್ಥಜನಚಿಂತಾಮಣಿ ಗೋತ್ರ ಚೂಡಾಮಣಿ ಪ್ರತ್ಯಕ್ಷ ಪಾರ್ವತಿ ಪ್ರತಿ ಬ್ರತಾರುಂಧತಿ, ಅಭಿನವಸರಸ್ವತಿ, ರೂಪವಿದ್ಯಾಧರಿ, ಸಕಲಕಲಾಧರಿ, ಮಹಾಲಕ್ಷ್ಮೀ ದೇವೀಲಬ್ಧವರ ಪ್ರಸಾದೆ ದಾನವಿನೋದೆ ಶ್ರೀಮತ್ರಿಭುವನಮಲ್ಲದೇವ ವಿಶಾಲವಕ್ಷಸ್ಥಳನಿವಾಸಿಯರಪ್ಪ ಶ್ರೀಮತು ಪದ್ಮಲದೇವಿಯರು" ಎಂದು ಪ್ರಶಸ್ತಿ ಬಿರುದುಗಲನ್ನು ಧರಿಸಿರುವುದು ಶಾಸನಗಳಿಂದ ತಿಳಿದು ಬರುತ್ತದೆ. ಇದರಿಂದ ರಾಣಿಯರ ಆದರ್ಶ ಅರ್ಹತೆಯು ಅರಿವಾಗುತ್ತದೆ. ಇವುಗಳಲ್ಲದೇ ಶಾಸನಗಳಲ್ಲಿ ಬರುವ "ಸುಖ ಸಂಕಟಾ ವಿನೋದದಿಂದ ರಾಜ್ಯಂಗೈಯುತ್ತವಿರೆ" ಎಂಬ ಮಾತುಗಳು

ಸಹ ರಾಣಿಯರು ರಾಜನ ಭೋಗವಸ್ತುಗಳಲ್ಲಿ ಒಬ್ಬಳು. ಸಾಮಾನ್ಯವಾಗಿ ಕಲ್ಯಾಣದ ಚಾಲುಕ್ಯರ ಶಾಸನಗಳಲ್ಲಿ ಬರುವವರೆಲ್ಲರೂ ಇಂತಹ ರಾಣಿಯರು.

ಆರನೆಯ ವಿಕ್ರಮಾದಿತ್ಯನ ಅನೇಕ ರಾಣಿಯರು ಸ್ವತಂತ್ರವಾಗಿ ಅಗ್ರಹಾರ, ಭತ್ತ ಗ್ರಾಮಗಳ ಆಳ್ವಿಕೆಯನ್ನು ಮಾಡಿದರೂ ಕೆಲವು ಪತಿಯೊಂದಿಗೆ ಆಡಳಿತದಲ್ಲಿ ಸಹಭಾಗಿತ್ವವನ್ನು ಪಡೆದಿರುವುದುಂಟು. ಮಾಳಲದೇವಿ[12], ಸಾವಲದೇವಿ[13], ಸುಗ್ಗಲದೇವಿ[14], ಜಾಲಕಲದೇವಿಯ ರಾಜನೊಂದಿಗೆ ಹೊಂದಿದ ಸರಸಪ್ರವೃತ್ತಿ ಇಂಗಳಿಗೆಯ ಶಾಸನದಲ್ಲಿ[15] ಕಂಡುಬಂದಿದೆ. ಆರನೆಯ ವಿಕ್ರಮಾದಿತ್ಯನು ಜಾಕಲದೇವಿಯೊಂದಿಗೆ ಸುಖಸಂಕಟಾ ವಿನೋದದಿಂದಿರಲು ಒಬ್ಬ ವ್ಯಾಪಾರಿ ಮಾಹುಮಾಣಿಕ್ಯ ಜಿನವಿಗ್ರಹವನ್ನು ತಂದು ತೋರಿಸಿದ ಅದನ್ನು ಮೆಚ್ಚಿದ ಅರಸು "ನಿನ್ನಾಳಿಕೆಯ ಊರೊಳು ಇದನ್ನು ಪ್ರತ್ಯಕ್ಷಿಸು" ಎಂದು ತಿಳಿಸಿದುದಲ್ಲದೆ ಆಕೆಯ ವ್ರತವೊಂದನ್ನು ಕೆಡಿಸುವೆನೆಂದು ಪ್ರತಿಜ್ಞೆಗೈದು ಸೋತುಹೋದ ಸರಸಪ್ರಸಂಗವೊಂದು ಉಲ್ಲೇಖವಾಗಿದೆ.

ಮಹಾರಾಣಿಯರಂತೆ ಮಹಾಮಂಡಲೇಶ್ವರರ ಸಾಮಂತರ ದಂಡನಾಯಕರುಗಳ ಮಡದಿಯರು ತಮ್ಮ ಗಂಡನೊಂದಿಗೆ ರಾಜಕೀಯದಲ್ಲಿ ಭಾಗವಹಿಸುವುದಂಟು. ಅಂತಹವರಲ್ಲಿ ಕದಂಬ ಅರಿಕೇಸರಿಯ ಪತ್ನಿ ಲಚ್ಚಲದೇವಿಯನ್ನು ಕ್ರಿ.ಶ. 1055ರ ಶಿಗ್ಗಾಂವ ಶಾಸನವೊಂದು ಇಂತು ವರ್ಣಿಸಿದೆ.[16] ಭೂವನಿತಾವರಂ ಹರಿಗನಾ ನೃಪಧೀರನು (ರ) ಸ್ಥಳಕ್ಕೆ ಲಕ್ಷ್ಮೀವಧು ಪೀನಬಾಹು ಯುಗಳಕ್ಕೆ ಜಯಾಂಗನೆ ತನ್ಮುಖಕ್ಕೆ ವಾಕುಶ್ರೀ ವಧುವಾಗಿ ರಂಜಿಸಿ ಮಹೋನ್ನತಿಯಂ ಪಡೆದುದ ಕೀರ್ತಿಲೀಲಾವತಿಯೆಂದು ಬಣ್ಣಿಪುದು ಲಚ್ಚಲದೇವಿಯನೀಂ ಜಗಜ್ಜನಂ.

**4.3 ಸ್ವತಂತ್ರ ಆಡಳಿತ**

ರಾಜರು, ಸಾಮಂತರು, ಬಹುಪತ್ನಿತ್ವವನ್ನು ಅನುಸರಿಸಿಕೊಂಡು ಬರುವುದು ಸಾಮಾನ್ಯ ವಾಗಿತ್ತು. ರಾಜಕೀಯ ಕಾರಣಗಳಿಗಾಗಿ, ರಾಜರು ಒಬ್ಬಳಿಗಿಂತ ಹೆಚ್ಚು ರಾಣಿಯರನ್ನು ಹೊಂದುವುದು ಸರ್ವೇ ಸಾಮಾನ್ಯವಾಗಿತ್ತು. ಹೀಗಾಗಿ ಇವರಲ್ಲಿ ಪಿರಿಯರಸಿ, ಪಟ್ಟಮಹಾದೇವಿ, ಪಟ್ಟಮಹಿಷಿ ಎಂದು ಕರೆಯಿಸಿಕೊಳ್ಳುವವಳು. ರಾಜನೊಂದಿಗೆ ಸುಖಸಂಕಟಾವಿನೋದದಿಂದ ರಾಜಧಾನಿಯಲ್ಲಿದ್ದರೆ, ಇನ್ನುಳಿದ ರಾಣಿಯರು, ರಾಜಪುತ್ರಿಯರು ಸಾಮ್ರಾಜ್ಯದ ಯಾವುದೋ ಒಂದು ಭಾಗವನ್ನು ಸ್ವತಂತ್ರವಾಗಿ ಆಳ್ವಿಕೆಯನ್ನು ಮಾಡಿಕೊಂಡು ಹೋಗುತ್ತಿದ್ದರು. ಇನ್ನೂ ಕೆಲವು ರಾಣಿಯರು ರಾಜನ

ಮರಣದ ನಂತರ ಅಪ್ರಾಪ್ತ ವಯಸ್ಸಿನ ಮಗನನ್ನು ಮುಂದಿಟ್ಟುಕೊಂಡು ವಿಧವೆಯರು ನೇರವಾಗಿ ಆಡಳಿತವನ್ನು ಕೈಕೊಂಡಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಇವರು ಮಂಡಳೇಶ್ವರ, ಸಾಮಂತ, ನಾಳ್ಗಾವುಂಡ, ಗಾವುಂಡ ಈ ಅಧಿಕಾರ ಶ್ರೇಣಿಗಳಲ್ಲದೆ ಭತ್ತಗ್ರಾಮ, ಅಗ್ರಹಾರಗಳಲ್ಲಿ ಸ್ವತಂತ್ರವಾಗಿ ಅಧಿಕಾರ ನಿರ್ವಹಿಸಿರುವುದನ್ನು ಶಾಸನಗಳು ಘೋಷಿಸುತ್ತವೆ.

ಎರಡನೆಯ ಪುಲಿಕೇಶಿಯ ಸೊಸೆ ಚಂದ್ರಾದಿತ್ಯನ ಮಡದಿ ವಿಜಯ ಭಟ್ಟಾರಿಕೆಯು ಕ್ರಿ.ಶ. 645ರ ಸುಮಾರಿಗೆ ರಾಜ ಚಂದ್ರಾದಿತ್ಯನು ಮರಣ ಹೊಂದಲು ವಿಜಯಭಟ್ಟಾರಿಕೆಯು ತನ್ನ ಅಪ್ರಾಪ್ತ ವಯಸ್ಸಿನ ಮಗನನ್ನು ಮುಂದಿಟ್ಟುಕೊಂಡು ಆಡಳಿತ ಮಾಡಿರುವುದನ್ನು ಕಾಣುತ್ತೇವೆ. ಕ್ರಿ.ಶ. 659ರ ನೇರೂರ ಶಾಸನವು 'ಸ್ವರಾಜ್ಯ ಪಂಚಮ ಸಂವತ್ಸರ' ಎಂದು ಇವಳ ಆಳ್ವಿಕೆಯನ್ನು ಹೇಳಿದೆ.[18] ಕ್ರಿ.ಶ. 912ರಲ್ಲಿ ಬನವಶಿಯ ಅಧಿಕಾರಿಯಾಗಿದ್ದ ಕಲಿವಿಟ್ಟರಸ ಕಾಲದಲ್ಲಿ ಬಂದಳಿಕೆಯ ನಾಳ್ಗಾವುಂಡನಾಗಿದ್ದ ನಾಗಾರ್ಜುನನು ಕ್ರಿ.ಶ. 912ರಲ್ಲಿ ಮರಣ ಹೊಂದಲು ಅವನ ರಾಣಿ ಜಕ್ಕಿಯಬ್ಬೆಯನ್ನು ನಾಳ್ಗಾವುಂಡ ಳನ್ನಾಗಿ ಮಾಡಿರುವುದನ್ನು ಶಾಸನವೊಂದು ಹೇಳಿದೆ.[19] ಅವಳು ಕ್ರಿ.ಶ. 918ರ ವರೆಗೂ ಆ ಹುದ್ದೆಯಲ್ಲಿ ಮುಂದುವರೆದಂತೆ ತೋರುತ್ತದೆ. ಅವಳ ನಂತರ ಅವಳ ಮಗಳು ಅಧಿಕಾರಕ್ಕೆ ಬಂದುದನ್ನೂ ಶಾಸನವು ಹೇಳಿದೆ.[20] ಹೀಗೆ ರಾಣಿಯರ ಆಡಳಿತ ಇದ್ದುದು ಸ್ಪಷ್ಟವಾಗುತ್ತದೆ.

ಕಲ್ಹಣನು ರಾಜತರಂಗಿಣಿಯಲ್ಲಿ ಕಾಶ್ಮೀರ ಪ್ರದೇಶದಲ್ಲಿ ಹಲವಾರು ರಾಣಿಯರು ಸ್ವತಂತ್ರವಾಗಿ ಆಳಿರುವುದನ್ನು ಹೇಳಿದ್ದಾನೆ. ಅದರಲ್ಲಿ ಶಂಕರವರ್ಮನ ಅನಂತರ ಉತ್ತರಾಧಿಕಾರಕ್ಕಾಗಿ ನಡೆದ ಹೋರಾಟದ ಪರಿಣಾಮವಾಗಿ ಗೋಪಾಲವರ್ಮನು ಕ್ರಿ.ಶ. 902ರಲ್ಲಿ ಪಟ್ಟವೇರಿದನು. ಅವನ ತಾಯಿ ಸುಗಂಧಾ ತಾನೇ ರಾಜ ಪ್ರತಿನಿಧಿಯಾಗಿ ರಾಜ ಕಾರ್ಯದ ಹೊಣೆ ಹೊತ್ತಳು. ಹದಿಹರೆಯದ ರಾಜ ಒಬ್ಬ ಮಂತ್ರಿಯ ಕುತಂತ್ರಕ್ಕೆ ಬಲಿಯಾಗಿ ಮರಣ ಹೊಂದಲು ಕ್ರಿ.ಶ. 904ರಲ್ಲಿ ಸುಗಂಧಾ ತಾನೇ ಪಟ್ಟವನ್ನೇರಿದಳು. ಎರಡು ವರ್ಷಗಳವರೆಗೆ ಅಧಿಕಾರ ನಡೆಸಿದಳು.[21] ಈಕೆ ನಿರ್ಮಿಸಿದ ಸುಗಂಧಾಪುರವೊಂದೇ ಆಕೆಯ ಸ್ಮಾರಕವಾಗಿ ಉಳಿದಿದೆ.

ಮುಂದುವರೆದು "ಯಶಸ್ಕರದೇವನ ಮರಣದ ನಂತರ ವರ್ಣತ, ಸಂಗ್ರಾಮದವ ಪ್ರವರಗುಪ್ತ, ಕ್ಷೇಮಗುಪ್ತ ಸಿಂಹಾಸನವನ್ನೇರಿದರು. ಕ್ಷೇಮಗುಪ್ತನು ಲೋಹದ ಪ್ರಮುಖ ರಾಜನಾದ ಸಿಂಹರಾಜನ ಮಗಳು ದಿದ್ದಾಳನ್ನು ಮದುವೆಯಾದನು. ಈಕೆ ತಾಯಿಯ ಕಡೆಯಿಂದ

ಖ್ಯಾತನಾದ ಶಾಹಿ ಅರಸು ಭೀಮಪಾಲನ ಮೊಮ್ಮಗಳು. ಈ ಮದುವೆಯ ಪರಿಣಾಮವಾಗಿ ಕಾಶ್ಮೀರದ ಇತಿಹಾಸದ ಗತಿಯೇ ಬದಲಾಯಿತು. ರಾಜನು ತನ್ನ ಹೆಂಡತಿಗೆ ಮಾರುಹೋಗಿದ್ದ ಇದು ಎಷ್ಟು ಬಹಿರಂಗವಾಗಿತ್ತೆಂದರೆ ಜನ ಅವನನ್ನು ದಿದ್ದಾಕ್ಷೇಮ ಎಂಬ ಅಡ್ಡ ಹೆಸರಿನಿಂದಲೇ ಕರೆಯುತ್ತಿದ್ದರು. "ಕ್ಷೇಮ ಗುಪ್ತನ ಮರಣದ ಅನಂತರ ಮೊದಲು ರಾಜಪ್ರತಿನಿಧಿಯಾಗಿ ಅನಂತರ ಸ್ವಂತಃರಾಣೀಯಾಗಿದ್ದು 23 ವರ್ಷಗಳ ಕಾಲ ಕಾಶ್ಮೀರವನ್ನಾಳಿದಳು. ಕ್ರಿ.ಶ. 1003ರಲ್ಲಿ ಅವಳು ಮರಣ ಹೊಂದುವವರೆಗೆ ಅಧಿಕಾರದಲ್ಲಿ ಇದ್ದುದನ್ನು ಕಲ್ಹಣ ವಿವರಿಸುತ್ತಾನೆ.[22]

ಅವನು ಮತ್ತೊಂದೆಡೆ ಕರ್ನಾಟಕ ದೇಶದಲ್ಲಿ ರಟ್ಟಾ ಎಂಬುವವಳು ದಕ್ಷಿಣಪಥವನ್ನು ಆಳುತ್ತಿದ್ದಳು. ಪ್ರಭಾವಶಾಲಿನಿಯಾದ ರಾಣಿ ದುರ್ಗಾದೇವಿಯಂತೆ, ಅವಳು ವಿಂಧ್ಯಾದ್ರಿಯ ಮಾರ್ಗಗಳನ್ನು ನಿಷ್ಕಂಟಕವನ್ನಾಗಿ ಮಾಡಿಕೊಂಡಿದ್ದಳು" ಎಂದು ಉಲ್ಲೇಖಿಸಿದ್ದಾನೆ.[23] ಹೀಗೆ ಸ್ವತಂತ್ರ ರಾಣಿಯರ ಆಳ್ವಿಕೆ ಇದ್ದುದು ಸ್ಪಷ್ಟವಾಗುತ್ತದೆ. ಆದರೆ ಕರ್ನಾಟಕವನ್ನು ಆಳಿದ ಈ ರಟ್ಟಾ ಯಾವ ಮನೆತನದವಳು ಎಂಬುದು ಮಾತ್ರ ಸ್ಪಷ್ಟವಾಗುವುದಿಲ್ಲ.

ಪ್ರಾರಂಭದ ರಾಜಮನೆತನಗಳಿಂದ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ರಾಣಿಯರು ಬಹು ಸಂಖ್ಯೆಯಲ್ಲಿ ಆಡಳಿತದಲ್ಲಿ ಭಾಗಿಗಳಾಗಿರುವುದು ಸ್ಪಷ್ಟವಾಗುತ್ತದೆ. ಮೊದಲಿನ ರಾಜಮನೆತನಗಳ ರಾಣಿಯರು ಉತ್ಸವಮೂರ್ತಿಯಂತೆ ಗಂಭೀರವಾಗಿ ತೋರುತ್ತಿದ್ದರೆ, ಕಲ್ಯಾಣದ ಚಾಲುಕ್ಯರ ರಾಣಿಯರು ಈ ಗಾಂಭೀರ್ಯವನ್ನೂ ಸಡಿಲಿಸಿ ಚಟುವಟಿಕೆಯ ವ್ಯಕ್ತಿಗಳಾಗಿರುವುದು ತೋರುತ್ತದೆ. ಹೀಗಾಗಿ ಇವರ ಕಾಲದ ಮಹಿಳೆಯರು ಹಿಂದಿಗಿಂತಲೂ ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿ ಉನ್ನತವಾದ ಸ್ಥಾನಮಾನವನ್ನು ಹೊಂದಿರುವುದು ಗೊತ್ತಾಗುತ್ತದೆ.

ರಾಣಿಯರು ಹೆಚ್ಚಾಗಿ ಅಗ್ರಹಾರ, ಭತ್ತ ಗ್ರಾಮಗಳಲ್ಲಿ ಆಡಳಿತವನ್ನು ನೋಡಿಕೊಂಡು ಹೋಗುತ್ತಿದ್ದರು. ಒಂದನೆಯ ಸೋಮೇಶ್ವರನ ರಾಣಿ ಕೇತಲದೇವಿಯು ಉತ್ತಮ ಅಗ್ರಹಾರ ಹೊನ್ನವಾಡದ ಆಡಳಿತವನ್ನು ನೋಡಿಕೊಂಡು ಹೋಗುತ್ತಿದ್ದ ವಿಷಯವನ್ನು ಕ್ರಿ.ಶ. 1054ರಲ್ಲಿ ಅಲ್ಲಿಯ ಶಾಸನವೊಂದು[24] ಇಂತು ಶ್ರೀಮತ್ಕೇತಲದೇವಿಯರು ತರ್ದವಾಡಿ ಸಾಸಿರದೊಳಗಣ ಆರುನೂರುಂಬಾಡದ ಕಂಪಣ ಬಾಗೆಯವ್ವತ್ತರ ಬಳ್ಳಿಯ ಉತ್ತಮ ಅಗ್ರಹಾರಂ ಪೊನ್ನವಾಡಮಂ ತ್ರಿಭೋಗಾಭ್ಯನ್ತರಸಿದ್ಧಿಯಿಂದಾಳುತ್ತ ಇರೆ" ಎಂದು ಹೇಳಿದೆ. ಆರನೆಯ ವಿಕ್ರಮಾದಿತ್ಯನ ಮಡದಿ

ಸಾವಳದೇವಿಯು ನೆರೆಗಲ್ಲ ಅಗ್ರಹಾರದ ಆಡಳಿತವನ್ನು ನೋಡಿಕೊಂಡರೆ[25] ಇನ್ನೊಬ್ಬ ರಾಣಿ ಪದ್ಮಲದೇವಿಯು ಅಗ್ರಹಾರ ಮಾಂಗೊಲದ ಆಡಳಿತವನ್ನು ನೋಡಿಕೊಳ್ಳುತ್ತಿದ್ದಾಳೆಂದು ಕ್ರಿ.ಶ. 1116ರ ಶಾಸನವೊಂದರಿಂದ ತಿಳಿಯುತ್ತದೆ.[26] ಕ್ರಿ.ಶ. 1095ರಲ್ಲಿ ವಿಕ್ರಮಾದಿತ್ಯನ ಮತ್ತೊಬ್ಬ ರಾಣಿ ಲಕ್ಷ್ಮೀದೇವಿಯು 18 ಅಗ್ರಹಾರಗಳನ್ನು, ಧರ್ಮಾಪುರವನ್ನು ಆಳುತ್ತಿದ್ದಾಳೆಂದು ಡಂಬಳ ಶಾಸನ ದಿಂದ ಗೊತ್ತಾಗುತ್ತದೆ.[27] ಆರನೆಯ ವಿಕ್ರಮಾದಿತ್ಯನ ಮಡದಿ ಅಂಗಬ್ಬರಸಿಯು ತರ್ದವಾಡಿ 1000 ರದಲ್ಲಿಯ ಬಾಗೆ 50ರಲ್ಲಿದ್ದ ಅಗ್ರಹಾರ ಗಂಡೆಗ ಗ್ರಾಮವನ್ನು ಆಳುತ್ತಿದ್ದಳೆಂದು ಕ್ರಿ.ಶ. 1089ರ ಶಾಸನವೊಂದು ಹೇಳಿದೆ.[28] ಇವನ ಮತ್ತೊಬ್ಬ ರಾಣಿ ಮಲಯಮತಿದೇವಿಯು ಚಿತ್ತಾಪುರ ತಾಲ್ಲೂಕಿನಲ್ಲಿರುವ ದಿಗ್ಗಾಗಿಯ ಅಗ್ರಹಾರದ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳೆಂದು ಅಲ್ಲಿರುವ ಶಾಸನವು ಇಂತು ಉಲ್ಲೇಖಿಸಿದೆ. ಶ್ರೀಮದ್ರಾಯಸರ್ವಜ್ಞನರ್ದ್ಧಾಂಗಿ ಶ್ರೀಮದಗ್ರಹಾರಂ ಬಿಗ್ಗವಿಗೆಯ ಮೇಲಾಳಿಕೆಯ ಶ್ರೀಮತ್ಪಿರಿಯರಸಿ ಪಟ್ಟಮಹಾದೇವಿ ಶ್ರೀಮದಭಿನವ ಸರಸ್ವತಿ ಮಲೆಯಮತಿ ದೇವಿಯರ್ ಗೋಗಿ ಹನುಮಾಕ್ಷಿ[29] ಶಾಸನವು ಇವಳು ಸಿಂದವಾಡಿ ನಾಡಿನ ಅಗ್ರಹಾರ ತುಂಬಳವನ್ನು ಆಳುತ್ತಿದ್ದಳು ಎಂದು ಹೇಳಿದೆ.[30]

ಡಾ.ಚೆನ್ನಿಕ ಎಲಿಗಾರ[31] ಅವರು ವಿಕ್ರಮಾದಿತ್ಯನು ತನ್ನ ಬಹುಸಂಖ್ಯಾತ ರಾಣಿಯರನ್ನು ಸಾಧ್ಯವಾದಷ್ಟು ದೂರದಲ್ಲಿಟ್ಟು ಸವತಿ ಮತ್ಸರ ತಪ್ಪಿಸಿದಂತೆ ರಾಜಕೀಯದತ್ತ ಅವರ ಮನಸ್ಸನ್ನು ತೊಡಗಿಸಿ ಕಾರ್ಯೋನ್ಮುಖ ಮಾಡಿದಲ್ಲಿ ಅವನ ರಾಜಕೀಯ ನಿಪುಣತೆ ವ್ಯಕ್ತವಾಗಿದೆ. ಇದು ಒಂದರ್ಥದಲ್ಲಿ ಸಾಂಸಾರಿಕ ನೆಮ್ಮದಿ ಇನ್ನೊಂದರ್ಥದಲ್ಲಿ ರಾಜಕೀಯ ಭದ್ರತೆಗೆ ಕಾರಣವಾಗಿತ್ತು ಎಂದಿದ್ದರೆ ಡಾ.ಜಿ.ಎಂ.ನಾಗಯ್ಯ ಅವರು ಚಕ್ರವರ್ತಿ ತನ್ನ ರಾಣಿಯರನ್ನು ಅಗ್ರಹಾರಗಳಲ್ಲಿ ಇರಿಸುತ್ತಿದ್ದುದಕ್ಕೆ ರಾಜಕೀಯ ಭದ್ರತೆಗಿಂತಲೂ ರಾಣಿಯರ ಭದ್ರತೆ ಪ್ರಮುಖ ಕಾರಣವಾಗಿದೆ. ಅಗ್ರಹಾರಗಳು ಧಾರ್ಮಿಕ ಕೇಂದ್ರಗಳಾಗಿವೆ. ಯಾರೇ ಶತ್ರುಗಳು ನುಗ್ಗಿ ಬಂದರೂ ರಾಜಧಾನಿಯನ್ನು ಕೊಳ್ಳೆಹೊಡೆಯುತ್ತಿದ್ದರೇ ವಿನಃ ಅಗ್ರಹಾರಗಳಾಗಿದ್ದ ಗ್ರಾಮಗಳಿಗೆ ಕೇಡನ್ನುಂಟು ಮಾಡುತ್ತಿರಲಿಲ್ಲ. ಅದರ ಬದಲಾಗಿ ಇನ್ನಷ್ಟು ದತ್ತಿಗಳನ್ನು ಅಗ್ರಹಾರಗಳಿಗೆ ಕೊಡುತ್ತಿದ್ದರು. ಉದಾಹರಣೆಗಾಗಿ ಬಾದಾಮಿ ಚಾಲುಕ್ಯ ಎರಡನೆಯ ವಿಕ್ರಮಾದಿತ್ಯನ ಕಾಂಚಿಯ ಶಾಸನವು ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕನು ಕಾಂಚಿಯನ್ನು ಗೆದ್ದು, ರಾಜಸಿಂಹೇಶ್ವರ ದೇಗುಲದ ಸಂಪತ್ತನ್ನು ನೋಡಿ, ಅದನ್ನು ಮರಳಿ ಆ ದೇವರಿಗೆ ಬಿಟ್ಟದ್ದನ್ನು ನೋಡಿದರೆ ರಾಜರ ಔದಾರ್ಯಕ್ಕೆ ಸಾಕ್ಷಿಯಾಗಿದೆ. ಈ ವಿಷಯವನ್ನು ಅವನ ತಾಮ್ರಪಟ

ಶಾಸನಗಳು ಒತ್ತಿ ಹೇಳುತ್ತವೆ. (ನರಸಿಂಹಪೋತವರ್ಮಣಾ ನಿರ್ಮಿತ ಶಿಲಾಮಯ ರಾಜ ಸಿಂಹೇಶ್ವರಾಧಿ ದೇವಕುಲ ಪ್ರಭೂತ ಸುವರ್ಣರಾಶಿ ಪ್ರತ್ಯರ್ಪಣೋಪಾರ್ಜಿತ ತಪುಣ್ಯಃ) ಇದನ್ನೇ ಕಾಂಚಿಯ ಶಾಸನವು ನಿಜವೆಂಬುದಕ್ಕೆ ಪ್ರಮಾಣವಾಗಿದೆ.[32] ಹೀಗೆ ಪ್ರಾಚೀನ ಕಾಲದಲ್ಲಿ ಸುರಕ್ಷಿತ ಸ್ಥಳಗಳೆಂದರೆ ಅಗ್ರಹಾರಗಳಾಗಿದ್ದವು. ಇಂಥ ಸುರಕ್ಷಿತ ಸ್ಥಳಗಳಲ್ಲಿ ರಾಣಿಯರನ್ನು ಆಡಳಿತದ ನಿರ್ವಹಣೆಗಾಗಿ ಇಡಲಾಗುತ್ತಿತ್ತು. ಅಲ್ಲದೆ ರಾಣಿಯರ ಮನಸ್ಸೂ ಚಂಚಲವಾಗದಂತೆ ಅರಿಷಡ್ವರ್ಗ ಗಳನ್ನು ಗೆಲ್ಲುವಂತೆ ವಾತಾವರಣ ಅಗ್ರಹಾರಗಳಲ್ಲಿರುತ್ತಿತ್ತು. ಇದರಿಂದ ಇವರೂ ಧಾರ್ಮಿಕ ಕಾರ್ಯಗಳಲ್ಲಿ ಹೆಚ್ಚಾಗಿ ಭಾಗವಹಿಸಿ ಅಲೌಕಿಕದ ಕಡೆಗೆ ಹೆಚ್ಚು ಚಿಂತಿಸುತ್ತಿದ್ದರು. ಈ ಕಾರಣಗಳಿಗಾಗಿ ರಾಣಿಯರಿಗೆ ಅಗ್ರಹಾರದ ಆಡಳಿತ ಕೊಡುತ್ತಿದ್ದರೇ ವಿನಃ ರಾಜಕೀಯದತ್ತ ಮನಸ್ಸನ್ನು ತೊಡಗಿಸಿ ಕಾರ್ಯೋನ್ಮುಖರನ್ನಾಗಿ ಮಾಡುವುದಕ್ಕಲ್ಲ ಎಂಬ ಮಾತಿನಲ್ಲಿ ಹೆಚ್ಚು ಸತ್ಯಾಂಶವಿದೆ. ರಾಣಿಯರು ಅಗ್ರಹಾರಗಳ ಆಡಳಿತಕ್ಕಿಂತಲೂ ಅದರ ಮೇಲ್ವಿಚಾರಣೆಯ ಕಡೆಗೆ ಗಮನ ನೀಡಿರುವುದನ್ನು ಕ್ರಿ.ಶ. 1107ರ ದಿಗ್ಬಾವಿ ಶಾಸನವೊಂದು ಮಲಯಮತಿ ದೇವಿಯ "ಶ್ರೀ ಮದಗ್ರಹಾರಂ ದಿಗ್ಬಿವಿಗೆಯ ಮೇಲಾಳಿಕೆ" ಎಂಬ ಮಾತು ಅದನ್ನೇ ಪೋಷಿಸುತ್ತದೆ.

ಕಲ್ಯಾಣದ ಚಾಲುಕ್ಯರ ಇನ್ನೂ ಕೆಲವು ರಾಣಿಯರು ಭತ್ತ ಗ್ರಾಮಗಳನ್ನು ಆಡಳಿತವನ್ನು ನೋಡಿಕೊಳ್ಳುತ್ತಿದ್ದರೆಂದು ಶಾಸನಗಳು ಉಲ್ಲೇಖಿಸುತ್ತವೆ. ಎರಡನೆಯ ಜಯಸಿಂಹನ ರಾಣಿ ಸುಗ್ಗಲ ದೇವಿಯು ಭತ್ತಗ್ರಾಮ ಬಲ್ಲನಿಟ್ಟಗೆಯ ಆಡಳಿತವನ್ನು ನಿರ್ವಹಿಸುತ್ತಿದ್ದರೆ[33] ತ್ರೈಲೋಕ್ಯಮಲ್ಲನ ಪಿರಿಯ ಅರಸಿ ಮೈಳಲದೇವಿಯು ಭತ್ತಗ್ರಾಮ ಹೊನ್ನವಾಡನ್ನೂ ಆಳುತ್ತಿದ್ದಳು.[34]

ಆರನೆಯ ವಿಕ್ರಮಾದಿತ್ಯನ ಐದು ಜನ ರಾಣಿಯರು ಭತ್ತಗ್ರಾಮಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಅದರಲ್ಲಿ ಚಂದಲದೇವಿಯ ಆಳಂದ 1000ರದಲ್ಲಿದ್ದ ಅನೇಕ ಭತ್ತ ಗ್ರಾಮಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳೆಂದು ಕ್ರಿ.ಶ. 1082ರ ಶಾಸನವೊಂದು "ಶ್ರೀಮತ್ಪಿರಿಯರಸಿ ಚಂದಲಾದೇವಿಯರು ಆಳಂದೆ ಸಾಸಿರ ಪ್ರಮುಖವನೇಕ ಭತ್ತ ಗ್ರಾಮಂಗಳು ಮಂದುಷ್ಟಾನಿಗ್ರಹಶಿಷ್ಟಾಪ್ರತಿಪಾಲನರಿಂದಾಳ್ದ ರಸುಗೆಯ್ಯುತ್ತಮಿರೆ" ಹೇಳಿದೆ.[35]

ಇನ್ನೊಬ್ಬ ರಾಣಿ ಹಿರಿಯಕೇತಲದೇವಿಯು ಭಲ್ಲಕುಂದೆ 300ರ ತೆಕ್ಕಕಲ್ಲು 12ರಲ್ಲಿದ್ದು ಭತ್ತ ಗ್ರಾಮ ಸಿರುಗುಪ್ಪೆ, ಕೊಳನೂರು ಎಂಬ ಮೂರೂರುಮಂ ಆಳುತ್ತಿದ್ದಳು. ಈ ಶಾಸನವು ಇವಳನ್ನು

'ಸಾವಂತಸೀಮಂತಿನಿ' ಪವಿತ್ರತೆ ಎಂದು ಉಲ್ಲೇಖಿಸಿದೆ. ಇದರಿಂದ ಇವಳಿಗೆ ಅನೇಕ ಸಾಮಂತರಿದ್ದರೆಂದು ಊಹಿಸಲು ಅವಕಾಶವಿದೆ. ಅದರಂತೆ ಸಾಮಂತರ ಮಡದಿಯರಿಂದ ಇವಳು ಸದಾ ಸುತ್ತುವರಿಯಲ್ಪಡುತ್ತಿದ್ದಳೆಂದು ತೋರುತ್ತದೆ.

ರಾಣಿ ಮೈಳಲದೇವಿಯು ಕಲ್ಬುರ್ಗಿ ಜಿಲ್ಲೆಯ ಕುಳಗೇರಿಯನ್ನು ಆಳುತ್ತಿದ್ದಳೆಂದು ಅಲ್ಲಿರುವ ಎರಡು ಶಾಸನಗಳಿಂದ ಗೊತ್ತಾಗುತ್ತದೆ. ಕ್ರಿ.ಶ. 1100ರ ಶಾಸನವೊಂದು "ಶ್ರೀಮತ್ರಿಭುವನ ಮಲ್ಲದೇವ ವಿಶಾಲವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮತು ಮೈಳಲದೇವಿಯರು ಭತ್ತಗ್ರಾಮ ಕುಣಿಲಂಗೆಯ... ಭ್ಯಂತರ ಸಿದ್ಧಿಯಿಂದಾಮಿತ್ತ[36] ಕ್ರಿ.ಶ. 1105ರ ಮತ್ತೊಂದು ಶಾಸನವು. "ಶ್ರೀ ಮನ್ಮಾಳಲದೇವಿಯರು ತಂಮಾಳಕೆ ಭತ್ತಗ್ರಾಮ ಕುಣಿಲಂಗೆ ಹಂಪಕವಿಯ ಮಹಾದೇವಣನ ಹೊಕ್ಕಣೆಯ ಧರ್ಮಕ್ಕೆ ಧಾರಾಪೂರ್ವಕಂ ಮಾರಿ ಸರ್ವ್ವನಮಸ್ಯವಾಗಿ ಮಾಗಿಣಿಗೆಯ ಕೋಲು ನಲ್ವತೆಂಟು ಗೇಣು ಅಳೆಯಲು ಬಿಟ್ಟ ಮತ್ತಿಯೆರಡು" ಎಂದು ಹೇಳಿದೆ.

### 4.4 ದಂಡನಾಯಕಿಯರಾಗಿ

ಬಳ್ಳಾರಿ ಜಿಲ್ಲೆಯ ರಾಗಿಮುಸಲವಾಡದ ಕ್ರಿ.ಶ. 1127ರ ಶಾಸನವೊಂದರಲ್ಲಿ ದಂಡನಾಯಕಿ ರತ್ನದೇವಿಯಕ್ಕನ ಉಲ್ಲೇಖ ಬರುತ್ತದೆ.[37] ಈಕೆ ನೊಳಂಬವಾಡಿ 32000ದ ದಂಡನಾಯಕನಾಗಿದ್ದ ರಾಣಿಭಟ್ಟಯ್ಯನ ಮಡದಿಯಾಗಿದ್ದಳು. ಶಾಸನದಲ್ಲಿ ಈಕೆಯನ್ನೂ ಪರಮಕಲ್ಯಾಣ ಫಲ ಸಹಶ್ರ ಭೋಗಭಾಗಿನೆ, ದ್ವಿತೀಯ ಲಕ್ಷ್ಮೀಸಮಾನೆ, ಖಲಹಾಸಗಮನೆಯಪ್ಪ, ಶ್ರೀಮನ್ಮಹಾನಾಯಕಿ, ದಣ್ಣನಾಯಕಿಲೆ ರತ್ನದೇವಿಯಕ್ಕಂಗಳು" ಎಂದು ಹೊಗಳಿದೆ. ಅವಳು ತನ್ನ ಪತಿ ರಾಣಿಭಟ್ಟಯ್ಯನ ಮರಣದ ನಂತರ ಅವಳು ದಂಡನಾಯಕಿಯಾಗಿ ಅಧಿಕಾರವನ್ನು ವಹಿಸಿಕೊಂಡಿರಬಹುದು.

ಕ್ರಿ.ಶ. 1125ರ ಕುಂಭಾಪುರದ ಶಾಸನವೊಂದರಲ್ಲಿ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ಸಿಂಗರಸನ ಮಡದಿ ಮೈಳಲದೇವಿಯಕ್ಕನನ್ನು ದಂಡನಾಯಕಿತಿ ಎಂದು ಉಲ್ಲೇಖಿಸುತ್ತದೆ. (ಸಿಂಗರಸರದಂಡನಾಯಕಿಲೆ ಮೈಳಲದೇವಿಯಕ್ಕ) ಇವಳು ಶಂಕರದೇವರಿಗೆ ಭೂಮಿದಾನ ನೀಡಿರುವುದನ್ನು ಉಲ್ಲೇಖಿಸುತ್ತದೆ.[38]

ಕ್ರಿ.ಶ. 1108–09ರ ಕರಿಗುದರಿಯ ಶಾಸನವು ಕದಂಬವಂಶದ ಮಹಾಮಂಡಲೇಶ್ವರ ತೈಲಪದೇವನು ಹಾನಗಲ್ಲನ್ನು ಆಳುತ್ತಿದ್ದಾಗ ಈಶ್ವರ ದಂಡನಾಯಕನ ಹೆಂಡತಿ ಮಲ್ಲಿಯಕ್ಕ ದಂಡನಾಯಕಿತಿಯು ಹೆರ್ಜುಗ್ಗಿಯ ಹುಣ್ಣಿಮೆಯ ಸೋಮವಾರದಂದು ತಾವರೆಗೆರೆಯಲ್ಲಿ ಶಂಕರದೇವ, ಕೇಶವ, ಮತ್ತು ಭಾಸ್ಕರದೇವರುಗಳನ್ನು ಪ್ರತಿಷ್ಠೆ ಮಾಡಿಸಿ ದೇವಾಲಯಕ್ಕೆ ಈತನು ದಾನ ಬಿಡುತ್ತಾನೆ. ಆ ಸಮಯದಲ್ಲಿ ಮಹಾಮಂಡಲೇಶ್ವರ ತೈಲಪದೇವ ಮತ್ತು ಪತ್ನಿ ಪಾಂಡ್ಯ ರಾಜಕುಮಾರಿ ಬಾಚಲದೇವಿಯರ ಉಪಸ್ಥಿತರಿದ್ದರೆಂದು ಶಾಸನವು ಹೇಳಿದೆ.[39] ಇಲ್ಲಿಯು ದಂಡನಾಯಕನ ಜೊತೆಯಲ್ಲಿ ದಂಡನಾಯಕಿತಿಯು ಇರುವ ಸಂದರ್ಭವನ್ನು ಗಮನಿಸಿದರೆ ಅಲಂಕಾರಕ್ಕಾಗಿ ದಂಡನಾಯಕಿತಿ ಎಂದು ಹೇಳಿರುವ ಸಾಧ್ಯತೆಯೇ ಹೆಚ್ಚು.

ಕ್ರಿ.ಶ. 1186ರ ಶಿರಸಂಗಿಯ ಶಾಸನವೊಂದು[40] ರಿಶ್ಯಶೃಂಗದಲ್ಲಿ ಹೆಬ್ಬೇಶ್ವರನು ಭೈರವದೇವರ ಪ್ರತಿಷ್ಠೆಯ ಕಾರ್ಯ ಕೈಗೊಂಡಿದ್ದ ಸಮಯದಲ್ಲಿ ಹೆಬ್ಬೆಯನಾಯಕನ ಹಿರಿಯನಾಯಕಿತಿ ಮಲ್ಲವ್ವೆಯು ಆ ಹೆಬ್ಬೇಶ್ವರ ದೇವಾಲಯದೊಳಗೆ ಮಹೇಶ್ವರದೇವರ ಪ್ರತಿಷ್ಠೆಯ ಮಾಡಿ ಆ ದೇವರ ನಿತ್ಯನಿವೇದ್ಯಕ್ಕೆ ಒಂದು ಮತ್ತರ ಭೂಮಿ ಕೊಟ್ಟಿರುವಳು.

ಆರನೆಯ ವಿಕ್ರಮಾದಿತ್ಯನ ಅರ್ಧಾಂಗಿ ಲಕ್ಷ್ಮಾದೇವಿಯ[41] ತಂದೆ ಕಂಕೋಜನಾದರೆ ತಾಯಿ ಮಸಣಿಕವೆನಾಯಕಿತಿಯರು ಖೇಡಗೆಯ ಕಂಕೇಶ್ವರ ಪೂಜೆ ಪುರಸ್ಕಾರಕ್ಕೆ ಭೂಮಿ ನಿವೇಶನ ಹೂದೋಟಗಳನ್ನು ನೀಡಿರುವುದು ಶಾಸನವೊಂದರಿಂದ ತಿಳಿದು ಬರುತ್ತದೆ. ಈ ಎರಡು ಸಂದರ್ಭಗಳಲ್ಲೂ ನಾಯಕಿತಿಯರು ದಾನವನ್ನು ನೀಡಿರುವುದನ್ನು ಗಮನಿಸಬಹುದಾಗಿದೆ. ಇದರಿಂದ ನಾಯಕಿತಿಯರಿಗೆ ಅಧಿಕಾರ ಇರಬಹುದೆಂದು ಊಹಿಸಲು ಅವಕಾಶವಿದೆ.

ಕ್ರಿ.ಶ. 1029ರ ಹೊಸೂರ ಶಾಸನದಲ್ಲಿ ಜಗದೇಕಮಲ್ಲನ ಮಹಾಪ್ರಚಂಡ ದಂಡನಾಯಕ ಮಾದರಸನ ಮಡದಿ ರೇವಕಬ್ಬರಸಿ ಪೊಸವೂರಿನ ಆಡಳಿತವನ್ನು ನೋಡಿಕೊಳ್ಳುತ್ತಿದ್ದ ವಿಷಯವನ್ನು ಹೇಳಿದೆ.[42]

### 4.5 ನಾಳ್ಗಾವುಂಡರಾಗಿ

ಒಂದು ನಾಡಿನ ಹತ್ತಾರು ಗ್ರಾಮಗಳ ಪ್ರದೇಶದ ಅಧಿಕಾರವನ್ನು ನಡೆಸುವನನ್ನು ನಾಳ್ಗಾವುಂಡನೆಂದು ಕರೆಯುತ್ತಾರೆ. ಪುರುಷರ ಜೊತೆಯಲ್ಲಿಯೇ ಹಲವಾರು ನಾಡುಗಳ

ಗಾವುಂಡರಾಗಿ ಮಹಿಳೆಯರು ಕೂಡಾ ಅಧಿಕಾರವನ್ನು ನಡೆಸಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಇದರಲ್ಲಿ ಜಕ್ಕಿಯಬ್ಬೆಯದು ಸುಪ್ರಸಿದ್ಧ ಹೆಸರು. ರಾಷ್ಟ್ರಕೂಟ ಕೃಷ್ಣನ ಕೈಕೆಳಗೆ ಮಹಾಸಾಮಂತ ಕಲಿವಿಟ್ಟರಸನು ಬನವಾಸಿ 12 ಸಾವಿರವನ್ನು ಆಳುತ್ತಿದ್ದಾಗ ಕಲಿವಿಟ್ಟರಸನ ಕೈಕೆಳಗೆ ನಾಳ್ಗಾವುಂಡ ನಾಗಾರ್ಜುನನು ನಾಗರಖಂಡ 70 ಆಳುವ ಸಂದರ್ಭದಲ್ಲಿ ಯಾವುದೋ ಯುದ್ಧದಲ್ಲಿ ಮರಣ ಹೊಂದಲು, ಕಲಿವಿಟ್ಟರಸನು ಸ್ವಂತ ಬಂದು ನಾಗಾರ್ಜುನನು ಜಕ್ಕಿಯಬ್ಬಗೆಗೆ ನಾಗರಖಂಡ 70ರ ನಾಳ್ಗಾವುಂಡಿಯನ್ನಾಗಿ ನಿಯಮಿಸಿದನು. ಇವಳ ಕೈಕೆಳಗೆ ನಣ್ದುವರ ಕಲಿಗ ಮತ್ತು ಸಂದಿಗರ ಕುಡಿವುಳ್ಪ ಎಂಬುವವರು ಪೆರ್ಗಡೆಗಳಾಗಿದ್ದರೆಂದು ಕ್ರಿ.ಶ. 918ರ ಬಂದಳಿಕೆಯ ಶಾಸನದಿಂದ ತಿಳಿದು ಬರುತ್ತದೆ.[43]

## ಅಡಿಟಿಪ್ಪಣಿಗಳು

1) ಮಹಾರಾಷ್ಟ್ರದ ಕನ್ನಡ ಶಾಸನಗಳು ಪುಟ 120
2) ಅದೇ ಪುಟ 127, ಕ್ರಿ.ಶ. 1113
3) ಅದೇ ಪುಟ 114, ಕ್ರಿ.ಶ. 1122
4) ರಾಯಚೂರ ಜಿಲ್ಲೆಯ ಶಾಸನಗಳು ಪುಟ 312, ಕ್ರಿ.ಶ. 1058
5) ಗೋಗಿ ಹನುಮಾಕ್ಷಿ, ಕಲ್ಬುರ್ಗಿ ಜಿಲ್ಲೆಯ ಶಾಸನಗಳು ಪುಟ 115 ಕ್ರಿ.ಶ. 1095
6) K.I. Vol-I No.17 ಕ್ರಿ.ಶ. 1055
7) ಅದೇ
8) ARIE 1946-47, 210, ಕ್ರಿ.ಶ. 1048
9) ಅದೇ 204 ಕ್ರಿ.ಶ. 1054
10) SII XIII 63 ಕ್ರಿ.ಶ. 1053
11) (EC VII ಹೊನ್ನಾಳಿ ಕ್ರಿ.ಶ. 1055)
12) Gazetter of the Bombay Precidency I Part-Ii P-449
13) Flect-J.F. Dynastics of Kanarese District P-448
14) Inscriptions from Nanded District P.32, 1123 A.D.
15) ಗೋಗಿ ಹನುಮಾಕ್ಷಿ ಕಲ್ಬುರ್ಗಿ ಜಿಲ್ಲೆಯ ಶಾಸನಗಳು ಪುಟ 115 ಕ್ರಿ.ಶ. 1094
16) K.I. Vol-I, 17 ಕ್ರಿ.ಶ. 1055
17) K.I. Vol-V, P-210 ಕ್ರಿ.ಶ. 1087
18) I.A. VII 163, ಕ್ರಿ.ಶ. 659
19) E.C. VII 219 ಕ್ರಿ.ಶ. 918
20) ಅದೇ
21) ನಿರ್ಪಾಜಿ ಭೀಮಭಟ್ಟ ಕಲ್ಹಣನ ರಾಜ ತರಂಗಿಣಿ ಕನ್ನಡ ಅನುವಾದ ಅಧ್ಯಾಯ 5
22) ಅದೇ VI
23) ಅದೇ ಪು 65
24) IA XIX 190 ಕ್ರಿ.ಶ. 1054
25) ಧಾ.ಜಿ.ಶಾ.ಸೂ.ಹಾನಗಲ್ 14 ಕ್ರಿ.ಶ. 1100

26) SII IX (i) 195 ಕ್ರಿ.ಶ. 1116

27) I.A. X ಪುಟ 185 ಕ್ರಿ.ಶ. 1095

28) SII XVIII 94 ಕ್ರಿ.ಶ. 1089

29) ಗೋಗಿ ಹನುಮಾಕ್ಷಿ, ಕಲ್ಬುರ್ಗಿ ಜಿಲ್ಲೆಯ ಶಾಸನಗಳು ಪುಟ 182, ಕ್ರಿ.ಶ 1107

30) SII IX (i) 175 ಕ್ರಿ.ಶ. 1107

31) ಎಲಿಗಾರ ಚೆನ್ನಕ್ಕ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ ಪುಟ

32) EI III, ಪುಟ-359-360

33) ARIE 1961-62 No. 542, ಕ್ರಿ.ಶ. 1029

34) ಕ್ರಿ.ಶ. XI (i) 83 ಕ್ರಿ.ಶ. 1049

35) ಗೋಗಿ ಹನುಮಾಕ್ಷಿ, ಕಲ್ಬುರ್ಗಿ ಜಿಲ್ಲೆಯ ಶಾಸನಗಳು ಪುಟ 230, ಕ್ರಿ.ಶ. 1099

36) ಗೋಗಿ ಹನುಮಾಕ್ಷಿ ಕಲ್ಬುರ್ಗಿ ಜಿಲ್ಲೆಯ ಶಾಸನಗಳು ಪುಟ 295

37) ಕನ್ನಡ ವಿಶ್ವವಿದ್ಯಾನಿಲಯ ಶಾಸನ ಸಂಪುಟ 1 ಬಳ್ಳಾರಿ ಜಿಲ್ಲೆ ನಂ.34 ಕ್ರಿ.ಶ. 1127

38) EI XIII No.28 A ಕ್ರಿ.ಶ. 1125

39) I.A. X ಕರಿಗುದರಿ ಕ್ರಿ.ಶ. 1108-09

40) KI Vol.I, 25, ಕ್ರಿ.ಶ. 1186

41) SII XX 94 ಕ್ರಿ.ಶ. 11-12

42) SII XI Part I No. 65 ಕ್ರಿ.ಶ. 1029

43) EC VII SK 219 ಕ್ರಿ.ಶ. 918

# ಅಧ್ಯಾಯ 5
# ಮಹಿಳೆ ಮತ್ತು ಶಿಕ್ಷಣ ಹಾಗೂ ಸಾಹಿತ್ಯ

## 5.1 ಶಿಕ್ಷಣ

"Education your Women First and leave them top themselves. Then they will tell you what reforms are necessary for them" ಎಂಬ ಸ್ವಾಮಿ ವಿವೇಕಾನಂದರ ಮಾತು ಮಹಿಳಾ ಶಿಕ್ಷಣದ ಮಹತ್ವವನ್ನು ಪ್ರತಿಪಾದಿಸುತ್ತದೆ. ಜವಾಹರಲಾಲ್ ನೆಹರು ಅವರು "ಒಬ್ಬ ಬಾಲಕನಿಗೆ ನೀಡಿದ ಶಿಕ್ಷಣವು ಒಬ್ಬ ವ್ಯಕ್ತಿಗೆ ನೀಡಿದ ಶಿಕ್ಷಣ, ಆದರೆ ಒಬ್ಬ ಬಾಲಕಿಗೆ ನೀಡಿದ ಶಿಕ್ಷಣವು ಇಡೀ ಕುಟುಂಬಕ್ಕೆ ನೀಡಿದ ಶಿಕ್ಷಣ" ಎಂಬ ಮಾತಿನಂತೆ ಸ್ತ್ರೀಯರಿಗೆ ನೀಡಿದ ಶಿಕ್ಷಣವು ಪುರುಷರಿಗಿಂತಲೂ ಹೆಚ್ಚು ಉಪಯುಕ್ತ ಎನ್ನುವ ಮಾತಿನಲ್ಲಿ ಸತ್ಯಾಂಶವಿದೆ. ಮಹಿಳೆಯು ತನ್ನ ವಿದ್ಯೆಯನ್ನು ಮಕ್ಕಳಿಗೆ ಧಾರೆ ಎರೆಯುವುದರ ಮೂಲಕ ತನ್ನ ಕುಟುಂಬವನ್ನೇ ವಿದ್ಯಾವಂತಳನ್ನಾಗಿ ಮಾಡಿ ಒಳ್ಳೆಯ ಸಂಸ್ಕಾರಗಳನ್ನು ನೀಡುತ್ತಾಳೆ. "ಮನೆಯೇ ಮೊದಲ ಪಾಠಶಾಲೆ ಜನನಿ ತಾನೆ ಮೊದಲ ಗುರುವು", ಎಂಬಂತೆ ತಾಯಿಯೇ ಮಗುವಿನ ಮೊದಲ ಗುರು ಆಗಿರುವುದರಿಂದ ಅವಳಿಗೆ ಒಳ್ಳೆಯ ಶಿಕ್ಷಣ ದೊರೆತಾಗ ತನ್ನ ಕುಟುಂಬದವರಿಗೆ ತಿಳಿಸಲು ಸಾಧ್ಯವಾಗುತ್ತದೆ. ತಾಯಿಯೇ ಶಿಕ್ಷಣವನ್ನು ಪಡೆಯದಿದ್ದರೆ ಅವಳು ತನ್ನ ಮಕ್ಕಳಿಗೆ ಶಿಕ್ಷಣ ವನ್ನೆಲ್ಲಿಂದ ಕೊಡಲು ಸಾಧ್ಯ? ಮಗುವಿಗೆ ಮೊದಲು ಸಿಗುವುದು ತಾಯಿಯಲ್ಲಿರುವ ಶಿಕ್ಷಣ ಸಂಸ್ಕಾರಗಳೇ ಅಲ್ಲವೇ? ಶಿವಾಜಿಯನ್ನು ಒಬ್ಬ ಮಹಾನ್ ನಾಯಕನಾಗುವಂತೆ ಮಾಡಿದ ಕೀರ್ತಿ ಅವನ ತಾಯಿಗೆ ಸಲ್ಲುತ್ತದೆ.

ವೇದ ಕಾಲದಲ್ಲಿ ಮಹಿಳೆಯರಿಗೆ ಪುರುಷರಿಗೆ ಸಮನಾಗಿಯೇ ಶಿಕ್ಷಣವು ಲಭ್ಯವಾಗುತ್ತಿತ್ತು ಎಂಬುದಕ್ಕೆ ಸಾಕಷ್ಟು ಆಧಾರಗಳು ಇವೆ. ವೇದಗಳ ಅನೇಕ ಸೂಕ್ತಿಗಳನ್ನು (ಋಕ್‌ಗಳನ್ನು) ಮಹಿಳೆಯರೇ ರಚಿಸಿದ್ದಾರೆ. ಇದು ಮಹಿಳೆಯರ ಪ್ರತಿಭೆಗೆ ದೊರಕಿದ ಪುರಸ್ಕಾರವನ್ನು ಉನ್ನತ ಸ್ಥಾನಮಾನಗಳನ್ನು ವಿದಿತಪಡಿಸುತ್ತವೆ. ಬ್ರಹ್ಮವಾದಿನಿಯರಾದ ಘೋಷ ಋಗ್ವೇದದ ಹತ್ತನೆಯ ಮಂಡಲದ 39 ಮತ್ತು 40 ಸೂಕ್ತಗಳನ್ನು ರಚಿಸಿದರೆ, ಋಗ್ವೇದದ ಪ್ರಥಮ ಮಂಡಲದ 126ನೆಯ ಸೂತ್ರದ ಏಳನೆಯ ಶ್ಲೋಕವನ್ನು ರಚಿಸಿದವಳು ರೋಮಶಾ ಎಂಬ ಬ್ರಹ್ಮವಾದಿನಿ. ಅದೇ ಮಂಡಲದ 179ನೆಯ ಸೂತ್ರದಲ್ಲಿಯ ಎರಡು ಶ್ಲೋಕಗಳನ್ನು ರಚಿಸಿದವಳು ಲೋಪಮುದ್ರೆ. ಅದೇ ರೀತಿ ಐದನೆಯ ಮಂಡಲದ 28ನೆಯ ಶ್ಲೋಕವನ್ನು ಬರೆದವಳು ವಿಶ್ವಾವಾರಾ ಎಂಬುವವಳು,

ಎಂಟನೆಯ ಮಂಡಲದ 91ನೆಯ ಶ್ಲೋಕವನ್ನು ರಚಿಸಿದವಳು ಅಪಾಲಾ, ಜೂಹೂ ಎಂಬುವವಳು ಹತ್ತನೆಯ ಮಂಡಲದ 139ನೆಯ ಶ್ಲೋಕವನ್ನು ರಚಿಸಿದರೆ ಅದಿತಿಯು 4ನೆಯ ಮಂಡಲದ 19ನೆಯ ಶ್ಲೋಕವನ್ನು ರಚಿಸಿರುವಳು. ಇಂದ್ರಾಣಿಯು ಹತ್ತನೆಯ ಮಂಡಲದ 86 ಮತ್ತು 159ನೆಯ ಶ್ಲೋಕಗಳನ್ನು, ಕದ್ರೂ 10ನೆಯ ಮಂಡಲದ 189ನೆಯ ಶ್ಲೋಕವನ್ನು ರಚಿಸಿದಳು. ಶ್ರದ್ಧಾ 10ನೆಯ ಮಂಡಲದ 151ನೆಯ ಶ್ಲೋಕವನ್ನು ರಚಿಸಿದಳು. ಇವರಲ್ಲದೆ ಸಿಕತಾನಿವಾವರೀ, ಉತ್ತರಚ್ಚಿಕಾ, ಗೌಪಯಾನಾ ಅವರು ಧರ್ಮ, ತತ್ವಶಾಸ್ತ್ರಗಳನ್ನು ಅಧ್ಯಯನ ಮಾಡಿದ ವಿದ್ವತ್ತನ್ನು ಸಂಪಾದಿಸಿಕೊಂಡಿದ್ದರು. ಹೀಗಾಗಿ ಅವರನ್ನು ಋಷಕಾ ಎಂದು ಕರೆಯಲಾಗಿದೆ.[1]

### 5.2 ಮಹಿಳಾ ಶಿಕ್ಷಣ ಕೇಂದ್ರಗಳು

ಪ್ರಾಚೀನ ಭಾರತದ ವಿಶ್ವವಿದ್ಯಾನಿಲಯಗಳಲ್ಲಿ ಯಾವ ವಿದ್ಯಾರ್ಥಿನಿಯರೂ ಅಧ್ಯಯನ ಮಾಡಿದಂತೆ ಕಂಡುಬರುವುದಿಲ್ಲ.[2] ಕರ್ನಾಟಕದ ಯಾವ ಘಟಕ ಸ್ಥಾನಗಳಲ್ಲಿ, ಅಗ್ರಹಾರಗಳಲ್ಲಿ, ಬ್ರಹ್ಮಪುರಿಗಳಲ್ಲಿ ಮಹಿಳೆಯರು ವ್ಯಾಸಂಗ ಮಾಡುತ್ತಿದ್ದ ಬಗ್ಗೆ ಉಲ್ಲೇಖಗಳಿಲ್ಲ. ಆದರೆ ಕೆಲವು ಧಾರ್ಮಿಕ ವಿದ್ಯಾಸಂಸ್ಥೆಗಳಲ್ಲಿ ವಿದ್ಯಾರ್ಥಿನಿಯರೂ ಇದ್ದ ಬಗ್ಗೆ ಉಲ್ಲೇಖಗಳಿವೆ. ಉದಾಹರಣೆಗೆ ರಾಜಕೇಸರಿವರ್ಮನ ಹದಿನಾಲ್ಕನೆಯ ವರ್ಷದ ಶಾಸನವು ವಿಡಾಳ ಅಥವಾ ಆರಂದಿ ಮಂಗಲದ ಜೈನ ಬಸದಿಯಲ್ಲಿ 500 ಜನ ವಿದ್ಯಾರ್ಥಿನಿಯರು ಅಧ್ಯಯನ ಮಾಡುತ್ತಿದ್ದರೆಂದು ಉಲ್ಲೇಖಿಸುತ್ತದೆ.[3]

ಪಂಪನ ಆದಿ ಪುರಾಣದಲ್ಲಿ ಒಂದು ದಿನ ವೃಷಭ ಸ್ವಾಮಿಯು ತನ್ನ ಇಬ್ಬರು ಹೆಣ್ಣು ಮಕ್ಕಳಿಗೆ ಶಿಕ್ಷಣವನ್ನು ನೀಡಬೇಕೆಂದು ಅವರಿಬ್ಬರನ್ನು ತನ್ನ ಹತ್ತಿರ ಕೂಡ್ರಿಸಿಕೊಂಡು ಬ್ರಾಹ್ಮಣೆ ಸಿದ್ಧಂ ನಮಃ ಎಂದು ಸೌಂದರಿಗೆ ಗಣಿತವನ್ನು ಬರೆದು ತೋರಿಸಿ ಸ್ವಯಂ ಭುವಾಭಿದಾನ ಪದ ವಿದ್ಯೆಗಳನ್ನು ಬೋಧಿಸಿ ವಿದ್ಯಾಪರಿಪರಪೂರ್ಣೆಯರನ್ನಾಗಿ ಮಾಡಿದನು.[4] ಅಮರೇಂದ್ರ ವಂದಿತ ಶ್ರೀ ಸುಕುಮಾರನ ಚಾರುಚರಿತದ ಪ್ರತಿಯನ್ನು ಜಿನಚಂದ್ರನು ತನ್ನ ಪುತ್ರಿ ತ್ರಯಂಗಳನೋದಿಸಲೆಂದು ಬರೆದನು[5] ಎಂಬ ಉಲ್ಲೇಖಗಳು ಮಹಿಳೆಯರ ವಿದ್ಯಾಭ್ಯಾಸವು ಮನೆಯಲ್ಲಿ ನಡೆಯುತ್ತಿತ್ತು ಎನ್ನುವುದು ಸ್ಪಷ್ಟವಾಗುತ್ತದೆ.

ಇನ್ನೂ ಕೆಲವು ಮಹಿಳೆಯರು ಮನೆಯಿಂದ ದೂರ ಹೋಗಿ ಋಷಿಗಳ ಹತ್ತಿರ ಅಧ್ಯಯನ ಮಾಡುತ್ತಿದ್ದರು. ಭವಭೂತಿಯ ಉತ್ತರ ರಾಮಚರಿತ್ರೆ ಎಂಬ ಕೃತಿಯಲ್ಲಿ ಅತ್ರೇಯಿ ವಾಲ್ಮೀಕಿ

ಋಷಿಗಳ ಆಶ್ರಯದಲ್ಲಿ ಅಧ್ಯಯನ ಮಾಡಿದರೆ, ಭವಭೂತಿಯ ಇನ್ನೊಂದು ನಾಟಕ 'ಮಾಲತಿ ಮಾಧವ'ರಲ್ಲಿಯ ಬೌದ್ಧ ಸನ್ಯಾಸಿನಿ ಕಾಮಂದತೆ ಭೂರಿವಸು ದೇವದಾತರ ಸಹಪಾಠಿಗಳಾಗಿದ್ದಳು.[6]

ಶಬರಿಯು ಮಾತಗ ಮಹರ್ಷಿಯ ಶಿಷ್ಯೆಯಾಗಿದ್ದು ಅವರ ಆಶ್ರಮದಲ್ಲಿಯೇ ಇದ್ದಳು.[7] ಸುಕುಮಾರ ಚರಿತ್ರೆಯಲ್ಲಿ ನಾಗಶ್ರೀ ಎಂಬುವವಳು ಪ್ರಸಿದ್ಧ ವಿದ್ವಾಂಸಳಾಗಿದ್ದಳೆಂದು ಹೇಳಲಾಗಿದೆ. ಇನ್ನೂ ಕೆಲವು ಸ್ತ್ರೀಯರು ಧಾರ್ಮಿಕ ಕೇಂದ್ರಗಳಲ್ಲಿ ಮಹಿಳೆಯರು ವ್ಯಾಸಂಗ ಮಾಡಿದಂತೆ ತೋರುತ್ತದೆ. ಮೇಲೆ ಉಲ್ಲೇಖಿಸಿದ ರಾಜ ಕೇಸರಿವರ್ಮನ ಹದಿನಾಲ್ಕನೆಯ ವರ್ಷದ ಶಾಸನವು ವಿಡಾಳ ಅಥವಾ ಅರಂದಿಮಂಗಲದ ಜೈನಬಸದಿಯಲ್ಲಿ 500 ವಿದ್ಯಾರ್ಥಿನಿಯರು ಅಧ್ಯಯನ ಮಾಡುತ್ತಿದ್ದರೆಂದು ಗೊತ್ತಾಗುತ್ತದೆ.[8]

ಜೈನರಲ್ಲಿ ಸಹ ಶಿಕ್ಷಣ ಪದ್ಧತಿಯು ಜಾರಿಯಲ್ಲಿದ್ದುದನ್ನು ಶಾಸನಗಳು ಪ್ರೋತ್ಸಾಹಿಸುತ್ತವೆ. ರಾಜರು ದಂಡನಾಯಕರು ರಾಣಿಯರು ದತ್ತಿಗಳನ್ನು ಬಿಡುವಾಗ ರಿಷಿಯರ್ಗ್ಗಂ ಅಜ್ಜಿಯಗ್ಗನಂ ಆಹಾರ ದಾನಕ್ಕಂ ಅಜಿಯರ ಕಪ್ಪಡಕ್ಕಂ[9] ಎಂದು ಕ್ರಿ.ಶ. 1047ರ ಶಾಸನವೊಂದು ಉಲ್ಲೇಖಿಸಿದೆ. ಇದರಿಂದ ಋಷಿಗಳಿಗೆ, ಅಜ್ಜಿಕೆಯರ ಆಹಾರಕ್ಕಲ್ಲದೆ, ಅಜ್ಜಿಕೆಯರ ಬಟ್ಟೆಗಾಗಿಯೂ ದಾನ ಬಿಟ್ಟಿರುವುದನ್ನು ಗಮನಿಸಿದಾಗ ಮಹಿಳೆಯರನ್ನು ವ್ಯಾಸಂಗಕ್ಕೆ ಆಕರ್ಷಿಸುವುದಕ್ಕೆ ಸಹಕಾರಿಯಾಗಿ ತ್ತೆನ್ನಬಹುದು. ಇನ್ನೊಂದು ಶಾಸನವು ರಿಷಿಯರ್ವ್ವರಾಹಾರದಾನಕ್ಕಂ ಅಜ್ಜಿಯರಾಹಾರದಾನಕ್ಕಂ ನಾಲ್ಕು ನೂರು ಮಠದ ಅಡಿಕೆಯ ತೋಟ ಒಂದು ಮತ್ತರು ಗದ್ದೆ ಮೂರು ಮತ್ತರು ಎರೆಭೂಮಿ ಬಿಟ್ಟಿರುವುದನ್ನು ಹೇಳಿದೆ.[10] ಇದರಿಂದ ಬಸದಿಗಳಲ್ಲಿ ಋಷಿಗಳು ಮತ್ತು ಅಜ್ಜಿಕೆಯರು ಜೊತೆಯಲ್ಲಿಯೇ ವ್ಯಾಸಂಗ ಮಾಡುತ್ತಿದ್ದರೆಂದು ಊಹಿಸಲು ಅವಕಾಶವಿದೆ. ಜೈನ ಸನ್ಯಾಸಿಗಳೂ, ಸನ್ಯಾಸಿನಿಯರೂ ಒಂದೇ ಬಸದಿಯಲ್ಲಿ ವಾಸಿಸುತ್ತಿದ್ದರೆನ್ನುವುದಕ್ಕೆ ಅನೇಕ ಉದಾಹರಣೆಗಳಿವೆ. ಗೊರವೂರ ಬಸದಿ, ನದಿಹರಳ ಹಳ್ಳಿಯ ಬಸದಿ, ಪುಲಗೇರಿಯ ಆನೆಸಜ್ಜಬಸದಿ, ಹೊನ್ನವಾಡದ ತ್ರಿಭುವನತಿಲಕ ಜಿನಾಲಯ.[11] ಇತ್ಯಾದಿ

ಸನ್ಯಾಸದ ದೀಕ್ಷೆಯನ್ನು ತೆಗೆದುಕೊಳ್ಳುವಾಗ ಮಹಿಳೆಯರು ಮಹಿಳೆಯರಿಂದಲೇ ದೀಕ್ಷೆಯನ್ನು ಪಡೆದುಕೊಂಡಿರುವ ಉಲ್ಲೇಖಗಳು ಶಾಸನಗಳಲ್ಲಿವೆ. ಉದಾ. ಕ್ರಿ.ಶ. 1100 ರ ಶ್ರವಣ ಬೆಳಗೊಳದ ಶಾಸನವೊಂದರಲ್ಲಿ ಪೊಲ್ಲಬ್ಬೆಕಂತಿಯರ ಗುಡ್ಡಿಸಾಯಿಬ್ಬೆ[12] ಎಂದು ಹೇಳಿದ್ದರೆ

ಇನ್ನೊಂದು ಶಾಸನದಲ್ಲಿ ಶ್ರೀಮತಿಗಂತಿಯ ಶಿಷ್ಯೆಮಾರಿಕಬ್ಬೆಗಂತಿ[13] ಎಂದು ಹೇಳಿದೆ. ಸನ್ಯಾಸಿಗಳಿಂದ ಸನ್ಯಾಸಿನಿ ದೀಕ್ಷೆ ಪಡೆದ ಸನ್ಯಾಸಿನಿಯರು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಅವರುಗಳೆಂದರೆ ಪೇರುಮಾಳಗುರವಡಿಗಳ ಶಿಷ್ಯೆ ಧಣ್ಣಿಕುತ್ತಾರವಿ ಗೊರವಿ[14] ಅಭಿಯಣನ್ದಿಪಂಡಿತದೇವರ ಶಿಷ್ಯೆ ನಾಣಬ್ಬೆಕಂತಿ[15] ಕುಮಾರಣನ್ದಿಭಟ್ಟಾರಕ ಸಿಷಿತ್ತಿ ಸಾಯಿಬ್ಬಿಕಂತಿ[16] ದಿವಾಕರಣಂದಿಯ ಶಿಷ್ಯೆ ಶ್ರೀಮತಿ ಗಂತಿ[17] ಅಚಲದೇವಿಯು ಬಾಲಚಂದ್ರನ ಶಿಷ್ಯಳು.[18]

ಇದರಂತೆ ಸನ್ಯಾಸಿನಿಯರಿಂದ ಪುರುಷರು ಸನ್ಯಾಸತ್ವವನ್ನು ಸ್ವೀಕರಿಸಿದ ಉದಾಹರಣೆಗಳಿವೆ. ರಾತ್ರಿಮತಿ ಗಂತಿಯರ ಗುಡ್ಡ ಬ್ರಹ್ಮಗೌವುಂಡ[19] ಮಾಳಿಯಬ್ಬೆಗಂತಿಯ ಗುಡ್ಡ ಜಗಮಣಚಾರಿ[20] ಮಾಕಬ್ಬೆಗಂತಿಯ ಮಡಿಬದ ಬೀಚಗವುಡ[21] ಕನಕ ಶ್ರೀ ಕಂತಿಯ ಇಪ್ಪತ್ತೆಂಟು ತಂಡದ ಶಿಷ್ಯರು[22] ಹೀಗೆ ಜೈನರಲ್ಲಿ ಗುರು ಶಿಷ್ಯರ ಸಂಬಂಧಕ್ಕೆ ಮಹಿಳೆಯರು, ಪುರುಷರೆಂಬ ಯಾವುದೇ ಭೇದ ಅಡ್ಡಿ ಬರಲಿಲ್ಲ. ಇದೊಂದು ವೈಶಿಷ್ಟ್ಯವೇ ಆಗಿತ್ತು. ಇಲ್ಲಿ ದೀಕ್ಷೆಯನ್ನು ಸ್ವೀಕರಿಸುವುದೆಂದರೆ ಅವರಿಂದ ಒಂದು ರೀತಿಯ ಧಾರ್ಮಿಕ ಉಪದೇಶವನ್ನು ಪಡೆಯುವುದೇ ಆಗಿದೆ.

ಹೊಟ್ಟೂರು ಶಾಸನವೊಂದರಲ್ಲಿ ಚಾಲುಕ್ಯ ಅಕ್ಕಾದೇವಿಯು ಮಠವೊಂದರಲ್ಲಿ ನಡೆಯುವ ವಿದ್ಯಾಭ್ಯಾಸಕ್ಕಾಗಿ ತಪೋನಿಯಮ ಜಲಸಮಾಧಿಶೀಲ ಸಂಪನ್ನೆಯಪ್ಪ ತಪಸ್ವಿ ಗಂಗಿಕಬ್ಬೆಗಳ ಕಾಲಂಕರ್ಚ್ಚಿನ ತಮಗೆ ಸಲ್ಲುವ ಅಂದಿಗರ್ಚಕಾಣಿಕೆಯ ಎರಡು ಗದ್ಯಾಣದ ತೆರೆಯನ್ನು ಬಿಟ್ಟು ಕೊಟ್ಟಿರುವಳು. ಕಾಳಾಮುಖಿ ಸನ್ಯಾಸಿನಿಯಾದ ಈ ತಪಸ್ವಿ ಗಂಗಿಕಬ್ಬೆ ಆ ವಿದ್ಯಾಕೇಂದ್ರಕ್ಕೆ ಮುಖ್ಯಸ್ಥ ಳಾಗಿರಬೇಕು. ಆದರೆ ಈ ಶಿಕ್ಷಣ ಕೇಂದ್ರದಲ್ಲಿ ಯಾರಾದರೂ ಮಹಿಳೆಯರಿದ್ದರೆಂಬುವ ಬಗ್ಗೆ ಮಾತ್ರ ಸ್ಪಷ್ಟವಾಗುವುದಿಲ್ಲ. ಹೀಗೆ ಕೆಲವು ಶಿಕ್ಷಣ ಕೇಂದ್ರದ ಮುಖ್ಯಸ್ಥರಾಗಿ ಮಹಿಳೆಯರು ಇರುವುದನ್ನು ಕಂಡರೆ ಆಗ ಅಧ್ಯಯನ ಮಾಡಿದ ಮಹಿಳೆಯರು ಇರಬಹುದೆಂದು ಊಹಿಸಬಹುದಾಗಿದೆ. ಕ್ರಿ.ಶ. 900ರ ಶಾಸನವೊಂದು[23] ನಾಗಾರ್ಜುನಯ್ಯ ಮತ್ತು ನಂದಿಗೆಬ್ಬೆಯರ ಮಗಳು ಸಾಮಿನಿರ್ಮಿಡಿಯು ಸರ್ವಶಾಸ್ತ್ರ ಪ್ರಸಿದ್ಧಿಯಾಗಿದ್ದಳೆಂದು ತಿಳಿಯುತ್ತದೆ. ಈ ಶಾಸನದ ವೈಶಿಷ್ಟ್ಯವೆಂದರೆ ಇದರಲ್ಲಿ ಒಬ್ಬ ಮಹಿಳೆಯ ಚಿತ್ರವಿದ್ದು ಆಕೆಯು ಒಂದು ಕೈಯಲ್ಲಿ ಓಲೆಯ ಗರಿಯ ಪುಸ್ತಕವಿದೆ. ಮುಂದೆ ತೆರೆದಿಟ್ಟ ವ್ಯಾಸಪೀಠ ಈ ಚಿತ್ರದ ಮೇಲು ಭಾಗದಲ್ಲಿಯೇ ಎರಡು ಸಾಲುಗಳ ಈ ಕೆಳಗಿನ ಶಾಸನವಿದೆ.

"ಸ್ವಸ್ತಿ ಶ್ರೀನಾಗಾರ್ಜುನ್ಯ ನನ್ದಿಗಬ್ಬೆಯ ಮಗಳು
ಸಾಮಿನಿರ್ಮಡಿ ಸರ್ವಶಾಸ್ತ್ರ ಪ್ರಸಿದ್ಧಿ ಸ್ತ್ರೀ" ಎಂದಿದೆ.

ಇದರಿಂದ ಕ್ರಿ.ಶ. 900 ರಲ್ಲಿ ಕೆಲವು ಮಹಿಳೆಯರಾದರೂ ಸರ್ವಶಾಸ್ತ್ರಗಳಲ್ಲಿ ಪಂಡಿತೆಯರಾಗಿದ್ದರೆಂದು ಹೇಳಬಹುದು. ಅದು ಅಲ್ಲದೆ ಬೀದರ ಜಿಲ್ಲೆಯ ಜಲಸಂಗ ಎಂಬಲ್ಲಿ ಇರುವ ಶಿಲಾಬಾಲಿಕೆಯೊಬ್ಬಳು ಪಾಠಿಯಂತೆ ರೂಪುಗೊಂಡಿರುವ ಕಲ್ಲಿನ ಮೇಲೆ ಬರೆಯುತ್ತಿರುವ ಚಿತ್ರವಿದೆ. ಇದಲ್ಲದೆ, ಇಂತಹುದೆ ಇನ್ನೆರಡು ಶಿಲಾಫಲಕಗಳ ಮೇಲೆ ಬರೆಯುತ್ತ ನಿಂತಿರುವ ಸ್ತ್ರೀ ವಿಗ್ರಹಗಳು ಇದ್ದು ಅವುಗಳಲ್ಲಿ ಒಂದು ಕಲ್ಬುರ್ಗಿ ಜಿಲ್ಲೆಯ ಚಿಂಚನಸೋರ ಮಹೇಶ್ವರ ದೇವಸ್ಥಾನದ ಪಶ್ಚಿಮದ ಗೋಡೆಯ ಮೇಲಿದೆ. ಮತ್ತೊಂದು ಸಂಕೇಶ್ವರದ ನಾರಾಯಣದೇವರ ದೇವಾಲಯದ ದಕ್ಷಿಣ ಭಾಗದಲ್ಲಿದೆ.

ಇತ್ತೀಚಿನವರೆಗೆ ಶಾಸನಗಳನ್ನು ಬರೆದ ಯಾವ ಮಹಿಳೆಯರೂ ದೊರೆಯುತ್ತಿರಲಿಲ್ಲ. ಆದರೆ ಇತ್ತೀಚೆಗೆ ರಾಣೆಬೆನ್ನೂರು ತಾಲ್ಲೂಕಿನ ನೂಲ್ಗೇರಿಯ ಶಾಸನವೊಂದರ ಕೊನೆಯಲ್ಲಿ ಹದಿಲ ಸೆಟ್ಟಿಕವ್ವೆಯ ಬರಹ ಎಂದಿರುವುದರಿಂದ ಸಂಪಾದಕರು ಸರಿಯಾಗಿ ಓದಿದ್ದೆ ಆದ ಪಕ್ಷದಲ್ಲಿ ಹದಿಸೆಟ್ಟಿಕವ್ವೆಯು ಮೊಟ್ಟ ಮೊದಲ ಶಾಸನ ಕವಿಯತ್ರಿಯಾಗುತ್ತಾಳೆ.[24]

ಆದರೆ ಇತ್ತೀಚಿಗೆ ಬಿ.ರಾಜಶೇಖರಪ್ಪನವರು ಚಿತ್ರದುರ್ಗದ ಹತ್ತಿರ ಪಂಡರ ಹಳ್ಳಿಯ ಬಳಿಯ ರಂಗನಾಥಸ್ವಾಮಿ ಬೆಟ್ಟದಲ್ಲಿ ಇರುವ ಸು.7–8ನೆಯ ಶತಮಾನದ ಬಾದಾಮಿ ಚಾಲುಕ್ಯ ಕಾಲದ ಶಾಸನ ಲಿಪಿಗೆ ನಿಕಟವಾದ ಹೋಲಿಕೆಯನ್ನು ಹೊಂದಿರುವ ಆರು ಸಾಲಿನ ಶಾಸನದ ಅಂತ್ಯದಲ್ಲಿ ಬಂದಿರುವ ಶ್ರೀ ಬಿಜಾಬೆಯೇ ಇದನ್ನು ರಚಿಸಿರುವ ಮಹಿಳೆ ಶ್ರೀ ಬಿಜಾಬೆ ಎಂಬುದು ಶ್ರೀ ವಿಜಯಬ್ಬೆ ಎಂಬ ಮಹಿಳೆಯ ವ್ಯವಹಾರಿಕ ರೂಪಶ್ರೀ ಎಂಬುದೇನಾದರೂ ಇಲ್ಲಿ ವಿಶೇಷವಾಗಿದ್ದಲ್ಲಿ ಬಿಜಾಬೆ ಅಥವಾ ವಿಜಯಬ್ಬೆ ಎಂಬುವುದೇ ನಿಜವಾದ ಹೆಸರಿನ ರೂಪವಾಗುತ್ತದೆ ಎಂದು ಮೊದಲ ಶಾಸನ ಬರೆದ ಕೀರ್ತಿಯು ಈ ಬಿಜಬೆಣೆ ಸಲ್ಲುತ್ತದೆ.[25] ಇದರಿಂದ ಪ್ರಾಚೀನ ಕಾಲದಿಂದಲೂ ಸಾಮಾನ್ಯ ಮಹಿಳೆಯರಿಗೂ ಅಲ್ಪ ಪ್ರಮಾಣದಲ್ಲಿಯಾದರೂ ಶಿಕ್ಷಣ ದೊರೆಯುತ್ತಿತ್ತೆನ್ನಬಹುದು. ಇದರಿಂದ ಸಾಮಾನ್ಯ ಮಹಿಳೆಯರು ಯಾವ ಶಿಕ್ಷಣ ಸೌಲಭ್ಯಗಳನ್ನು ಹೊಂದಿದಂತೆ ತೋರುವುದಿಲ್ಲ ಎಂಬ ಎಸ್.ಎಸ್.ವೀರಪ್ಪ ಅವರ ಅಭಿಪ್ರಾಯ ಅಷ್ಟೊಂದು ಸಮಂಜಸವೆನಿಸುವುದಿಲ್ಲ.[26]

ಸಾಮಾನ್ಯ ಶಿಕ್ಷಣದ ಜೊತೆಯಲ್ಲಿ ಅವರಿಗೆ ಆಡಳಿತಕ್ಕೆ ಸಂಬಂಧಿಸಿದ ಶಿಕ್ಷಣವು ದೊರೆಯುತ್ತಿತ್ತೆನ್ನಬಹುದು. ನಾಗರಖಂಡದ ನಾಳ್ಗಾವುಂಡ ತನ್ನ ಪ್ರಭುವಿಗಾಗಿ ಹೋರಾಡಿ ವೀರ

ಮರಣ ಹೊಂದಿದಾಗ, ಅವನ ಹೆಂಡತಿಯಾದ ಜಕ್ಕಿಯಬ್ಬೆಯು ಉತ್ತರಾಧಿಕಾರಿಣಿಯಾಗಿ ಅಧಿಕಾರ ವಹಿಸಿಕೊಂಡು, ಅವಳು ನಿವೃತ್ತಿ ಹೊಂದಲು ಬಯಸಿದಾಗ ಅವಳ ಮಗಳನ್ನು ಆ ಕಾರ್ಯಕ್ಕೆ ನಿಯೋಜಿಸದಳೆಂದು ತಿಳಿದು ಬರುತ್ತದೆ.[27]

ಆರನೆಯ ವಿಕ್ರಮಾದಿತ್ಯ ಹಿರಿಯ ಅರಸಿಯಾಗಿದ್ದ ಲಕ್ಷ್ಮೀದೇವಿಯು ಕ್ರಿ.ಶ. 1080ರಲ್ಲಿ ಅಗ್ರಹಾರ ದ್ರೋಣಪುರ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು.[28] ಅವನ ಇನ್ನೊಬ್ಬ ಮಡದಿ ಪಿರಿಯಕೇತಲದೇವಿಯು ಅಗ್ರಹಾರ ಸಿರಿಗುಪ್ಪೆ ಹಾಗೂ ಕೊಳನೂರ ಮತ್ತು ಸಿರಿಯಾರಗಳ ಆಡಳಿತ ಗಾರಳಾಗಿದ್ದಳು.[29] ಅವಳನ್ನು ಇನ್ನೊಂದು ಶಾಸನವು ಅನೇಕ ದೇಶ ಭಾಷಾ ಸಂಗೀತ ವಿದ್ಯಾಧತಿ ಎಂದು ಕರೆದಿದೆ.[30] ಪದ್ಮಲದೇವಿಯು ಅಗ್ರಹಾರ ಮಾಂಗೋಲದಲ್ಲಿ ಆಡಳಿತ ನಡೆಸುತ್ತಿದ್ದಳೆಂದು ಅದೊಂದು ಪ್ರಸಿದ್ಧ ಶಿಕ್ಷಣ ಕೇಂದ್ರವಾಗಿತ್ತೆಂದು ಕ್ರಿ.ಶ. 1116ರ ಶಾಸನವೊಂದರಿಂದ ತಿಳಿಯುತ್ತದೆ.[31] ಹೀಗೆ ಮಹಿಳೆಯರು ಅಗ್ರಹಾರಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದುದರಿಂದ ಅವರಿಗೆ ಆಡಳಿತಕ್ಕೆ ಸಂಬಂಧ ಪಟ್ಟ ಶಿಕ್ಷಣವು ದೊರೆಯುತ್ತಿತ್ತೆನ್ನಲು ಅವಕಾಶವಿದೆ.

ರಾಜಮನೆತನದ ಮಹಿಳೆಯರು ತಮ್ಮ ರಾಜರ ಮನಸೆಳೆಯುವುದಕ್ಕಾಗಿ ಸಂಗೀತ, ನೃತ್ಯಗಳಂತಹ ಕಲೆಯ ತರಬೇತಿಯನ್ನು ಪಡೆಯುತ್ತಿದ್ದರು. ಈ ವಿಷಯವಾಗಿ ನೇರವಾದ ಉಲ್ಲೇಖ ಗಳಿಲ್ಲದಿದ್ದರೂ ರಾಣಿಯರು ಹೊಂದಿರುವ ಬಿರುದು ವಿಶೇಷಣಗಳಿಂದ ತಿಳಿಯಬಹುದಾಗಿದೆ. ಅಂತಹವರಲ್ಲಿ ಪ್ರಮುಖರಾದವರೆಂದರೆ ಚಾಲುಕ್ಯ ಜಗದೇಕಮ್ಮ ದೇವನ ರಾಣಿ ಸುಗ್ಗಲದೇವಿ ಕಲಿಕಾಲ ಸರಸ್ವತಿಯಾಗಿದ್ದರೆ[32] ಒಂದನೇಯ ಸೋಮೇಶ್ವರನ ರಾಣಿ ಮೈಳಲದೇವಿ ವಿದ್ಯಾಧರಿ ಯಾಗಿದ್ದಳು.[33] ಕ್ರಿ.ಶ. 1049ರ ಶಾಸನವೊಂದು ಪದುಮಲದೇವಿ, ಚಾಮಲದೇವಿ, ಬೊಪ್ಪಾದೇವಿಯರಿ ಮೂವರುಂಶಾಸ್ತ್ರ ಗೀತನೃತ್ಯದಲು ಪ್ರಾವುಡಯರುಂ ಎಂದು ಹೊಗಳಿದೆ.[34] ಚಾಲುಕ್ಯ ಭುವನೇಶ್ವರನ ಮಲ್ಲ ಮಡದಿ ಕಂಚಮಲ್ಲ ಮಹಾದೇವಿಯು ಶ್ರೀ ಗಾಂಗ ವಿದ್ಯಾಧರಿ ಸರಳಕಲಾಧರಿ ಆಗಿದ್ದಳು.[35]

**5.3 ಸಾಹಿತ್ಯ**

ಕಲ್ಯಾಣದ ಚಾಲುಕ್ಯ ಪೂರ್ವ ಕಾಲದಿಂದಲೂ ಮಹಿಳೆಯರು ಸಾಹಿತ್ಯ ನಿರ್ಮಾಣದಲ್ಲಿ ಹಿಂದೆ ಬಿದ್ದಿಲ್ಲ. ಹಿಂದೆ ಉಲ್ಲೇಖಿಸಿರುವಂತೆ ಮಹಿಳೆಯರು ವೇದಗಳಲ್ಲಿ ಹಲವಾರು ಮಂತ್ರಗಳನ್ನು ರಚಿಸಿದ್ದಾರೆ ಎಂಬುವುದು ವಿಧಿತವಾಗುತ್ತದೆ. ಕ್ರಿ.ಶ. ಪ್ರಾರಂಭದ ಗಾಥಾಸಪ್ತಸತಿಯಲ್ಲಿ ರೇವಾ,

ರೋಹಾ, ಮಾಧವಿ, ಅನುಲಕ್ಷ್ಮಿ, ಪಾಹ್ಯೆ, ವದ್ಧಾವಹೀ ಮತ್ತು ಶಶಿಪ್ರಭಾ ಎಂಬ ಏಳು ಜನ ಕವಯಿತ್ರಿಯರ ಉಲ್ಲೇಖ ಕಂಡುಬರುತ್ತದೆ.[36]

ಹತ್ತನೆಯ ಶತಮಾನದ 'ಕಾವ್ಯಮೀಮಾಂಸಾ' ಕರ್ತೃ ರಾಜಶೇಖರನು "ಪುರುಷರಂತೆ ಸ್ತ್ರೀಯರೂ ಕವಿಗಳಾಗಬಲ್ಲರು, ಕಾವ್ಯ ನಿರ್ಮಾಣಕ್ಕೆ ಅಗತ್ಯವಾದ ಸಂಸ್ಕಾರವು ಆತ್ಮಗತವಾಗಿದ್ದು ಸ್ತ್ರೀ ಪುರುಷರೆಂಬ ಲಿಂಗಭೇದವನ್ನು ಅವಲಂಬಿಸಿರುವುದಿಲ್ಲ ಎಂದು ಹೇಳಿದ್ದಾನೆ.[37] ಸಂಸ್ಕೃತ ಸುಭಾಷಿತ ಗ್ರಂಥಗಳಲ್ಲಿಯೂ ಅಲಂಕಾರ ಶಾಸ್ತ್ರ ಗ್ರಂಥಗಳಲ್ಲಿಯೂ ಸುಮಾರು 32 ಜನ ಸಂಸ್ಕೃತ ಕವಿಯತ್ರಿಯರ, ಬಿಡಿ ಪದ್ಯಗಳು ಉಲ್ಲೇಖಿತವಾಗಿವೆ. 4 ಜನ ಕವಿಯತ್ರಿಯರ ಸಂಪೂರ್ಣ ಕೃತಿಗಳು ಉಪಲಬ್ಧವಾಗಿವೆ.[38] ಬಿಡಿ ಪದ್ಯಗಳನ್ನು ಬರೆದ ಕವಯಿತ್ರಿಯರಲ್ಲಿ ಶೀಲಾಭಟ್ಟಾರಿಕಾ, ಪದ್ಮಾವತಿ, ಭಾವದೇವಿ, ಇಂದುಲೇಖಾ, ತ್ರಿಭುವನ ಸರಸ್ವತೀ, ವಿದ್ಯಾವತಿ, ಸುಭದ್ರಾ ಮೊದಲಾದವರು ಮುಖ್ಯರಾಗಿರುವರು. ಇವರ ಕಾಲ, ದೇಶ ಮತ್ತು ಜೀವನ ಚರಿತ್ರೆ ಮಾತ್ರ ಸ್ಪಷ್ಟವಾಗಿರುವುದಿಲ್ಲ.[39]

**ಅಕ್ಕಮಹಾದೇವಿ**

ವಚನ ಸಾಹಿತ್ಯದಲ್ಲಿಯೇ ಅಕ್ಕಮಹಾದೇವಿಯ ಹೆಸರು ಅಮೋಘವಾದುದು ಅವಳು ಒಂದು ಧರ್ಮದ ಅಥವಾ ಒಂದು ಮತದ ವ್ಯಕ್ತಿಯಲ್ಲ, ಎಲ್ಲ ಕಾಲದ ಎಲ್ಲಾ ಧರ್ಮದ, ಎಲ್ಲಾ ದೇಶದ ಜನರು ಅನುಸರಿಸಬಹುದಾದ ಅನೇಕ ಸದ್ಗುಣಗಳ ಖಣಿ ಅದಕ್ಕಾಗಿಯೇ ಆಕೆ ಎಲ್ಲರಿಗೂ ಎಲ್ಲ ಕಾಲಕ್ಕೂ ಅಕ್ಕ. ಸಂಪ್ರದಾಯಿಕ ಸಮಾಜ ವ್ಯವಸ್ಥೆಯಲ್ಲಿ ಹುಟ್ಟಿ ಬೆಳೆದ ಅಕ್ಕ. ವೈರಾಗ್ಯ ಸಾಧಕಳಾಗಿ ಅನುಭಾವಿಯಾದುದು ಮಹಾಸಾಹಸದ ಕಥೆಯಾಗಿದೆ. ಮಹಾದೇವಿಯಕ್ಕ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಉಡುತಡಿಯ ಶಿವಭಕ್ತ ದಂಪತಿಗಳಾದ ಸುಮತಿ–ನಿರ್ಮಲ ಶೆಟ್ಟಿಯರ ಮಗಳಾಗಿ ಜನಿಸಿ, ಕಷ್ಟ ಕಾರ್ಪಣ್ಯಗಳನ್ನರಿಯದೇ ಬೆಳೆದು ತರುಣಿಯಾಗುತ್ತಾಳೆ. ಮನ ದಲ್ಲಿ ಚೆನ್ನಮಲ್ಲಿಕಾರ್ಜುನನೇ ಗಂಡನಾಗಬೇಕೆಂದು ಮನದಿಂಗಿತವನ್ನು ದೇವನಲ್ಲಿ ಪ್ರಾರ್ಥಿಸುತ್ತಾಳೆ.

ಅಂತರಂಗದಲ್ಲಿ ಚೆನ್ನಮಲ್ಲಿಕಾರ್ಜುನನೇ ತನ್ನ ಪತಿ ಎಂದು ಅಂದುಕೊಂಡಾಗಲೇ ಆಕೆಯ ರೂಪವೇ ಆಕೆಗೆ ವೈರಿಯಾಗಿ ಕಾಡುತ್ತದೆ. ಒಮ್ಮೆ ಊರ ದೊರೆ ಕೌಶಿಕನು ವೈಹಾಳಿಯಿಂದ ಬರುತ್ತಿರುವಾಗ ಮಹಾದೇವಿಯಕ್ಕನನ್ನು ಕಂಡು ಮೋಹಗೊಳ್ಳುವನು. ಅತಿ ವಾಷಯಿಯಾದ ಆತನು ಮಹಾದೇವಿಯಕ್ಕನ ತಂದೆ–ತಾಯಿಗಳಿಗೆ ಈ ವಿಷಯವನ್ನು ತಿಳಿಸುವನು. ಮುಂದೆ ತಂದೆ

ತಾಯಿಗಳು ಭಯಗ್ರಸ್ತರಾಗಿ ಅಕ್ಕನನ್ನು ಒತ್ತಾಯಿಸಿ ಮದುವೆಗೆ ಒಪ್ಪಿಸುವರು. (ಈ ವಿಷಯ ಕುರಿತು ಹಲವಾರು ಭಿನ್ನಾಭಿಪ್ರಾಯಗಳಿವೆ) ಅವಳು ಮುಂದೆ ವೈವಾಹಿಕ ಜೀವನ ನಡಿಸಿದಳೇ ಎಂಬುವುದರ ಬಗ್ಗೆಯೂ ಹಲವಾರು ಅಭಿಪ್ರಾಯಗಳಿವೆ. ಆಕೆಯ ವಿವಾಹ ಕೌಶಿಕನೊಡನೆ ಆಗಿರಲಿ ಆಗದಿರಲಿ ಆ ವಿಷಯ ವೈರಾಗ್ಯ ಲೋಕದಲ್ಲಿ ಅಕ್ಕನ ಸ್ಥಾನವನ್ನು ಕಿಂಚಿತ್ತು ಕಿರಿದನ್ನಾಗಿ ಮಾಡಲಾಗದು. ವಿವಾಹಕ್ಕೆ ಒಪ್ಪದೆ ಎಲ್ಲವನ್ನು ತೊರೆದು ಓಡಿ ಹೋಗಿದ್ದು ಅದ್ಭುತ ಸಂಗತಿಯೇ! ವಿವಾಹವಾಗಿಯೂ ಅದರ ಕಾಲ್ತೊಡಕುಗಳನ್ನೆಲ್ಲ ಹರಿದೊಗಿದು, ಸಂಸಾರ ಬಂಧನಕ್ಕೆ ಸಿಕ್ಕಿಯೂ ಕಮಲ ಪತ್ರದ ಮೇಲಿನ ನೀರ ಹನಿ ಅದಕ್ಕೆ ಅಂಟಿಕೊಳ್ಳದೆ ಮರಳಿ ಬರುವುದು ಅಕ್ಕನಂತವರಿಗೆ ಮಾತ್ರ ಸಾಧ್ಯ. ಈ ಘಟನೆಯು ಅಕ್ಕನ ವ್ಯಕ್ತಿತ್ವವನ್ನು ಹೆಚ್ಚಿಸಿತೇ ವಿನಃ ಕುಂದಿಸಲಿಲ್ಲ.

**ಅಕ್ಕನಾಗಮ್ಮ (ನಾಗಲಾಂಬಿಕೆ)**

ಬಸವಣ್ಣನವರ ಹಿರಿಯ ಸಹೋದರಿಯಾದ ನಾಗಲಾಂಬಿಕೆಯು ಮಾದರಸ–ಮಾದಲಾಂಬಿಕೆಯರ ಹಿರಿಯ ಮಗಳು ಚಿಕ್ಕಂದಿನಲ್ಲೇ ಗುರು ರೇವಣ್ಣಸಿದ್ದರ ಪ್ರಭಾವದಿಂದ ಅವಳು ಶಿವಭಕ್ತಿ ಹಾಗೂ ಯೋಗಸಾಧನೆಯ ಕಡೆಗೆ ಒಲವು ಉಂಟಾಯಿತು. ಈಕೆಯ ಅಜ್ಜಿಯ ಊರಾದ ಇಂಗಳೇಶ್ವರದಲ್ಲಿ ಆಕೆ ಶಿವಯೋಗ ಸಾಧನೆ ಮಾಡಿದ ಗುಹೆ ಇದೆ. ಬಸವಣ್ಣನವರು ಕೂಡಲ ಸಂಗಮಕ್ಕೆ ಹೊರಟು ನಿಂತಾಗ ತಮ್ಮನನ್ನು ಬಿಟ್ಟಿರಲಾರದೆ ಅಕ್ಕ ನಾಗಮ್ಮನೂ ಸಂಗಮಕ್ಕೆ ಅವನೊಡನೆ ಹೋದಳು. ಅಲ್ಲಿ ಗುರು ಜಾತವೇದ ಮುನಿಗಳ ಆಶ್ರಯ ಪಡೆದು ಅನುಭಾವಿ ಯಾದಳು. ಮುಂದೆ ಬಸವಣ್ಣನವರು ಗಂಗಾಂಭಿಕೆಯೊಡನೆ ವಿವಾಹವಾಗಲು ಆಗ ಅಕ್ಕನಾಗಮ್ಮ ಪತಿ ಶಿವಸ್ವಾಮಿ ಹಾಗೂ ಮಗ ಚೆನ್ನಬಸವನೊಂದಿಗೆ ಕಲ್ಯಾಣಕ್ಕೆ ಹೋದಳು. ನಂತರ ಅವರು ಬಸವಣ್ಣನ ಧರ್ಮಕಾರ್ಯಗಳಿಗೆ ಆಸರೆ ಆಗಿ ನಿಂತರು.

**ಅಕ್ಕಮ್ಮ**

'ರಾಮೇಶ್ವರ ಲಿಂಗ' ಎಂಬ ಅಂಕಿತದಿಂದ 153 ವಚನಗಳನ್ನು ರಚಿಸಿರುವ ಅಕ್ಕಮ್ಮ ಸಾಮಾನ್ಯ ವರ್ಗದಿಂದ ಬಂದವಳು. ಸಂಸಾರ ಬಂಧನ ವ್ಯಾಮೋಹಗಳಿಂದ ದೂರವಾಗಿ ಆಧ್ಯಾತ್ಮ ಸಾಧನೆಗೈಯ್ದ ವಿರಕ್ತೆ. ಆಚಾರವೇ ಪ್ರಾಣವೆಂಬ ದೃಢ ನಿಷ್ಠೆ ಆಕೆಯದು. ಪ್ರೌಢವಾಗಿ ಚಿಂತಿಸಬಲ್ಲ, ಸಾಮುದಾಯಕ ಸ್ವಾಥ್ಯಕ್ಕಾಗಿ ಹಂಬಲಿಸುವ ಅಕ್ಕಮ್ಮನ ಸಾಮಾಜಿಕ ಪ್ರಜ್ಞೆ ಅಪೂರ್ವವಾದುದು. ಸಮಕಾಲೀನ ಸಮಾಜದ ಜೀವನ ವಿಧಾನ, ಆಚಾರ, ವ್ಯವಹಾರ, ಧಾರ್ಮಿಕ ರೀತಿನೀತಿಗಳ

ವಿಶ್ಲೇಷಣೆಯಲ್ಲಿ ಅಕ್ಕಮ್ಮನ ವಿಮರ್ಶಾತ್ಮಕ ಪ್ರಜ್ಞೆ ಹರಳುಗಟ್ಟಿದೆ. ಗುರುಲಿಂಗ ಜಂಗಮವಾದರೂ ಸರಿ ಆಚಾರ ದ್ರೋಹವಾಗದಂತೆ ನೋಡಿಕೊಳ್ಳಬೇಕು.

**ಅಮುಗೆ ರಾಯಮ್ಮ**

ನೇಕಾರ ಕುಲದ ಅಮುಗಿ ದೇವಯ್ಯನ ಪತ್ನಿ ರಾಯಮ್ಮ. 'ಅಮರೇಶ್ವರಲಿಂಗ' ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾಳೆ. ಸದ್ಯಕ್ಕೆ ಆಕೆಯ 116 ವಚನಗಳು ಲಭ್ಯವಾಗಿದ್ದು, ಅವುಗಳನ್ನು ಅವಲೋಕಿಸಿದಾಗ ರಾಯಮ್ಮ ನಿಷ್ಠುರ ಸ್ವಭಾವದ ಸಾಧಕಿ ಎನ್ನುವುದು ಕಂಡುಬರುತ್ತದೆ. ಭಕ್ತ ಸ್ಥಳದಿಂದ ಐಕ್ಯಸ್ಥಳದವರೆಗಿನ ಆಕೆಯ ಅಂತರಂಗದ ವಿಕಾಸದ ಸ್ವರೂಪ ವಚನಗಳಲ್ಲಿ ಪಡಿಮಾಡಿದೆ. ಖಂಡಿತವಾದಿಯಾದ ರಾಯಮ್ಮ, ಡಾಂಬಿಕ ಭಕ್ತರನ್ನು, ವಾಗಾದ್ವೈತಿಗಳನ್ನು ಟೀಕಿಸಿದ್ದಾಳೆ. ವೇಷಧಾರಿ ವಿರಕ್ತರನ್ನು ಕಂಡು ಆಕ್ರೋಶದಿಂದ ಅಬ್ಬರಿಸಿದ್ದಾಳೆ.

**ಆಯ್ದಕ್ಕಿ ಲಕ್ಕಮ್ಮ**

ಅಮರೇಶ್ವರ ಲಿಂಗ ಅಂಕಿತದಿಂದ ಇಪ್ಪತ್ತೈದು ವಚನಗಳನ್ನು ರಚಿಸಿರುವ ಲಕ್ಕಮ್ಮ ಆಯ್ದಕ್ಕಿ ಮಾರಯ್ಯನವರ ಧರ್ಮಪತ್ನಿ. ಬಾವ ಶುದ್ಧಿಯಿಂದ ಮಹಾಶರಣದ ತಿಪ್ಪೆಯ ತಪ್ಪಲಕ್ಕಿಯ ತಂದು ದಾಸೋಹವನ್ನಾಚರಿಸುತ್ತ, ಪ್ರಸಾದ ಜೀವಿಯಾದ ಮಾರಯ್ಯನವರ ಸತ್ಯನಿಷ್ಠ ಕಾಯಕದಲ್ಲಿ ಸಹಭಾಗಿಯಾಗಿ, ಕಾಯಕದಲ್ಲಿ ಸಹಭಾಗಿಯಾಗಿ, ಕಾಯಕಯೋಗಿಯಾದವಳು ಅನುಭವಿ ಲಕ್ಕಮ್ಮ.

ಲಕ್ಕಮ್ಮನವರು ರಾಯಚೂರು ಜಿಲ್ಲೆಯಲ್ಲಿನ ಲಿಂಗಸೂರು ತಾಲ್ಲೂಕಿನಲ್ಲಿ ಬರುವ ಒಂದು ಚಿಕ್ಕ ಹಳ್ಳಿ ಅಮರೇಶ್ವರದವರು. ಈ ಗ್ರಾಮದಲ್ಲಿರುವ ಅಮರೇಶ್ವರ ದೇವರು ಅವರ ಆರಾಧ್ಯ ದೈವ ಹೀಗಾಗಿ ಇವರ ವಚನಗಳ ಅಂಕಿತವೂ ಅಮರೇಶ್ವರ ಎಂದಿದೆ.

ಕಾಯಕವೇ ಕೈಲಾಸ ಎನ್ನುವ ಧೀಮಂತ ತತ್ವವನ್ನು ಶ್ರದ್ಧೆಯಿಂದ ಪಾಲಿಸಿ ಕಾಯಕನಿಷ್ಠೆಯ ಸಾಕಾರ ಮೂರ್ತಿಯಾದವಳು ಆಯ್ದಕ್ಕಿ ಲಕ್ಕಮ್ಮ. ಅಸಿಧಾರವ್ರತವಾದ ಕಾಯಕ ನಿಷ್ಠೆಯ ದಾರಿಯಲ್ಲಿ ಒಮ್ಮೊಮ್ಮೆ ಜೋಲಿ ತಪ್ಪುವ ಗಂಡನಿಗೂ ಆಸರೆ ನೀಡಿ ಕೈ ಹಿಡಿದು ಎತ್ತಿ ಅರಿವಿನ ಮಾರ್ಗದಲ್ಲಿ ಮುನ್ನಡೆಸಿದ ಲಕ್ಕಮ್ಮ ಉದಾತ್ತ ವಿಚಾರವಾದಿಯಾಗಿದ್ದಾಳೆ.

**ಕಾಳವ್ವೆಯರು**

ವಚನ ಸಾಹಿತ್ಯದಲ್ಲಿ ನಾಲ್ಕು ಜನ ಕಾಳವ್ವೆಯರು ಕಾಣಿಸಿಕೊಳ್ಳುವರು. ಅವರಲ್ಲಿ

1) ಊರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ

2) ಕದರಿ ಕಾಯಕದ ಕಾಳವ್ವೆ

3) ಸಿದ್ಧಿ ಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆ

4) ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ

ಈ ನಾಲ್ವರೂ ವಚನಗಾರ್ತಿಯರು. ಅನುಭವಿಗಳು ಕ್ರಮವಾಗಿ ಕರ್ಮಹರ ಕಾಳೇಶ್ವರ ಅಂಕಿತದಲ್ಲಿ ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯ ಎರಡು ವಚನಗಳು, ಊರಿಲಿಂಗ ಪೆದಗದಿಗಳರಸ ಅಂಕಿತದಲ್ಲಿ ಊರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯ 12 ವಚನಗಳು, ಭೀಮೇಶ್ವರಾ ಅಂಕಿತದಲ್ಲಿ ಸಿದ್ದ ಬುದ್ದಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯ ಒಂದು ವಚನ ಹಾಗೂ ಗುಮ್ಮೇಶ್ವರಾ ಅಂಕಿತದಲ್ಲಿ ಕದಿರ ಕಾಯಕದ ಕಾಳವ್ವೆಯ ಒಂದು ವಚನ ಈ ವರೆಗೆ ಪ್ರಕಟವಾಗಿವೆ.[40]

**ಬಾಚಿ ಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ**

ಕರ್ಮಹರ ಕಾಳೇಶ್ವರ ಅಂಕಿತದ ಕಾಳವ್ವೆ ಬಾಚಿಕಾಯಕದ ಬಸವಯ್ಯನವರ ಪುಣ್ಯಸ್ತ್ರಿ. ಕೇತಲದೇವಿಯಂತೆ ಈಕೆಯೂ ಪತಿ ವೃತ್ತಿಯಲ್ಲಿ ಸಹಚಾರಿಯಾಗಿ ಬದುಕಿದ ಶರಣೆ ಅಂತೆಯೇ ತಮ್ಮ ಕಾಯಕದ ಪ್ರತಿಮೆಯನ್ನು ಅನುಭವದ ಅಭಿವ್ಯಕ್ತಿಗೆ ಬಳಸಿಕೊಂಡಿರುವುದು ಗಮನಾರ್ಹವಾಗಿದೆ.

**ಕದರಿ ಕಾಯಕದ ಕಾಳವ್ವೆ**

ಗುಮ್ಮೇಶ್ವರಾ ಅಂಕಿತದಲ್ಲಿ ವಚನಗಳನ್ನು ರಚಿಸಿರುವ ಕದರಿ ಕಾಯಕದ ಕಾಳವ್ವೆ ಮತ್ತೊಬ್ಬ ವಚನಕಾರ್ತಿ ಅವಳ ಒಂದು ವಚನ ಹೀಗಿದೆ:

ಕದಿರು ಮುರಿಯೆ ಏನೂ ಇಲ್ಲ
ವ್ರತಹೀನನ ನೆರೆಯಲ್ಲಿಲ್ಲ ಗುಮ್ಮೇಶ್ವರಾ[41]

ಅವಳ ದೃಷ್ಟಿಯಲ್ಲಿ ಕದರಿ ಮುರಿಯುವುದು ಒಂದೇ ವ್ರತಹೀನರನ್ನು ನೆರೆಯುವುದು ಒಂದೇ ಇವು ಯಾವ ಕಾಲಕ್ಕೂ ಗುಮ್ಮೇಶ್ವರನನ್ನು ಒಲಿಸಲಾರವು. ಎರಡನೇ ಸಾಲಿನಲ್ಲಿ ದೊರೆತ ಅವಳ ಈ ವಚನವು ಎಂತಹ ಗೂಡಾರ್ಥಕ್ಕೆ ಅವಕಾಶ ಮಾಡಿಕೊಟ್ಟಿದೆ ಎಂಬುದನ್ನರಿಯಬೇಕು.

**ಊರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ**

ಉರಿಲಿಂಗಪೆದ್ದ ಗಳರಸ ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿರುವ ಊರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯವರ ಹದಿಮೂರು ವಚನಗಳು ಈವರೆಗೆ ಲಭ್ಯವಾಗಿವೆ. ವ್ರತಾಚರಣೆ, ಪ್ರಸಾದ ನಿಷ್ಠೆ, ಸತ್ಯ ಶುದ್ಧ, ಕಾಯಕ ಶ್ರದ್ಧೆ, ಸದ್ಭಕ್ತನ ವಿವರಗಳೇ ಈಕೆಯ ವಚನಗಳ ವಸ್ತು. ಅಂದಿನ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ನಿರರ್ಥಕ ಯಜ್ಞಯಾಗಾದಿಗಳನ್ನು ಜೀವ ಹಿಂಸೆಯನ್ನು ಕಾಳವ್ವೆ ವಿಡಂಬಿಸಿದ್ದಾಳೆ.

**ಸಿದ್ಧ ಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆ**

ಭೀಮೇಶ್ವರನ ಅಂಕಿತದಲ್ಲಿ ವಚನಗಳನ್ನು ರಚಿಸಿರುವ ಸಿದ್ಧಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆ. ಇವಳದು ಈವರೆಗೆ ಒಂದು ವಚನ ಮಾತ್ರ ಲಭ್ಯವಾಗಿದ್ದು, ಅವಳು ವ್ರತಭ್ರಷ್ಟರನ್ನು ಲಿಂಗಬಾಹ್ಯರನ್ನು ತರಾಟೆಗೆ ತೆಗೆದುಕೊಂಡವಳು. ಇಂಥ ಹೀನರ ದರ್ಶನ ಸತ್ಯ ನಾಯಮುಖ ನೋಡಿದಂತೆ ಕೆಲಸಕ್ಕೆ ಬಾರದ ಕಾಗೆಯ ಮುಖವ ಕಂಡಂತೆ ಅಪಶಕುನ, ಅಂಥವರೊಂದಿಗೆ ಎಂದಿಗೂ ನುಡಿಯಲಾಗದು ಎನ್ನುತ್ತಾಳೆ ಕಾಳವ್ವೆ.

ವ್ರತಭ್ರಷ್ಟನ ಲಿಂಗಬಾಹ್ಯನ ಕಂಡಡೆ
ಸತ್ತನಾಯ, ಕಾಗೆಯ ಕಂಡಂತೆ
ಅವರೊಡನೆ ನುಡಿಯಲಾಗದು ಭೀಮೇಶ್ವರ[42]

**ಕನ್ನಡಿ ಕಾಯಕದ ರೇವಮ್ಮ**

ಸದ್ಗುರು ಸಂಗನಿರಂಗಲಿಂಗ ಎಂಬ ಅಂಕಿತದಿಂದ ವಚನಗಳನ್ನು ರಚಿಸಿರುವ ರೇವಮ್ಮ ಅವಳ ಇನ್ನೊಂದು ಹೆಸರು ರೆಮ್ಮವ್ವೆ. ಬಸವಾದಿ ಶರಣರ ಸಮಕಾಲೀನಳು. ಅಂದಿನ ಪರಿಸರದ ಪ್ರಭಾವಲಯದಲ್ಲಿ ಕುಡಿಯೊಡೆದ ಚೇತನ ಅವಳದು. ಈವರೆಗೆ ಈಕೆಯ ಒಂದು ವಚನ ಮಾತರ ಲಭ್ಯವಾಗಿದ್ದು ಅದರಲ್ಲಿ ಷಟ್ಸ್ಥಲ, ಅಷ್ಟಾವರಣಗಳ ಸೂತ್ರೀಕರಿಸಿ ಕನ್ನಡಿ ಕೈಯಲ್ಲಿ ಹಿಡಿದು ತನ್ನ

ತಾ ನೋಡಿಕೊಳ್ಳುವುದು ಬದುಕಿನ ಮಾರ್ಗ, ಹಾಗಿದ್ದರೂ ಲಿಂಗ, ಜಂಗಮ, ಪ್ರಸಾದ ಕೊಂಬಲ್ಲಿ ತಪ್ಪಬಾರದು. ತಪ್ಪಿದಲ್ಲಿ ಕೊಂದರೂ ಅಪರಾಧವಲ್ಲ, ಪಾಪವಲ್ಲ ಎಂದು ಹೇಳುವ ಅವಳ ಅಗಾಧ ನಿಷ್ಠೆಯನ್ನು ತನ್ನ ಕನ್ನಡಿ ಕಾಯಕದ ಪ್ರತಿಮೆಯೊಂದಿಗೆ ನಿರೂಪಿಸಿದ್ದಾಳೆ.

**ಕೊಂಡೆಮಂಚಣ್ಣಗಳ ಪುಣ್ಯಸ್ತ್ರೀ ಲಕ್ಷ್ಮಮ್ಮ**

ಅಗಜೇಶ್ವರಲಿಂಗ ಎಂಬ ಅಂಕಿತದಲ್ಲಿ ವಚನವನ್ನು ರಚಿಸಿರುವ ಲಕ್ಷ್ಮಮ್ಮ ಆಕೆಯ ಹಿಂದಿರುವ ವಿಶೇಷಣದಿಂದ ಅವಳು ಕೊಂಡೆಮಂಚಣ್ಣಗಳ ಪತ್ನಿ.

**ಕೊಟ್ಟಣದ ಸೋಮವ್ವೆ**

ಭತ್ತ ಕುಟ್ಟುವ ಕಾಯಕವನ್ನು ಮಾಡಿಕೊಂಡಿದ್ದ ಕೊಟ್ಟಣದ ಸೋಮವ್ವೆಯು ಕ್ರಿ.ಶ. 1160ರಲ್ಲಿ ಇದ್ದಿರಬಹುದೆಂದು ಕರ್ನಾಟಕ ಕವಿ ಚರಿತ್ರೆಕಾರರು ಹಾಗೂ ಕನ್ನಡ ಸಾಹಿತ್ಯ ಚರಿತ್ರೆಗಾರರು ಅಭಿಪ್ರಾಯ ಪಟ್ಟಿದ್ದಾರೆ. 'ನಿರ್ಲಜ್ಜೇಶ್ವರಾ' ಎಂಬ ಅಂಕಿತದಿಂದ ವಚನಗಳನ್ನು ರಚಿಸಿದ್ದಾಳೆ.

**ಗಂಗಾಬಿಕೆ**

ಬಸವಣ್ಣನವರ ಪ್ರಿಯ ಪತ್ನಿಯಾದ ಗಂಗಾಂಭಿಕೆಯು ಬಲದೇವ ಮಂತ್ರಿಯ ಮಗಳು. ನೀಲಲೋಚನೆಯಂತೆ ಬಸವಣ್ಣನವರ ಮಹತ್ಕಾರ್ಯಗಳಲ್ಲಿ ಸಹಭಾಗಿನಿಯಾಗಿ ಕಾರ್ಯ ನಿರ್ವಹಿಸಿದ್ದಾಳೆ. ಗಂಗಾಪ್ರಿಯ ಕೂಡಲ ಸಂಗಮದೇವಾ ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದು ಈವರೆಗೆ 9 ವಚನಗಳು ಲಭ್ಯವಾಗಿವೆ.

**ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿ**

ಕುಂಭೇಶ್ವರ ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿರುವ ಕೇತಲದೇವಿಯು ಕುಂಬಾರ ಗುಂಡಯ್ಯನ ಪತ್ನಿ ಆಗಿರಬೇಕು ಇವಳು ಬೀದರ ಜಿಲ್ಲೆಯ ಬಾಲ್ಕಿಯವಳು. ಪತಿಯ ಜೊತೆ ಗಡಿಗೆ ಸಿದ್ಧಪಡಿಸುವ ಕಾಯಕದಲ್ಲಿ ತೊಡಗಿದ ಈಕೆ ಬಸವಾದಿ ಶರಣ ಶರಣೆಯರ ಪ್ರಭಾವದಿಂದ ವಚನ ರಚನೆಗೂ ಕೈ ಹಾಕಿದ್ದಾಳೆ. ಭುವನಕೋಶದಲ್ಲಿ ಈಕೆ ಮೆರೆದ ಒಂದು ಪವಾಡದ ವಿವರ ಬರುತ್ತದೆ. ಕೇತಲದೇವಿ ನಿತ್ಯ ಲಿಂಗಕ್ಕೆ ಪಾವುಡವನ್ನು ಹಾಕುವ ವ್ರತವನ್ನು ಕೈಕೊಂಡಿದ್ದಳಂತೆ,

ಒಮ್ಮೆ ಅದು ದೊರೆಯದೆ ಹೋಗಲು ತನ್ನ ಎದೆಯ ಚರ್ಮವನ್ನೇ ತೆಗೆದು ಹಾಕಲು ಶಿವನ ಮೆಚ್ಚಿದನಂತೆ. ಈ ಕಥೆ ಅವಳ ವ್ರತನಿಷ್ಠೆಯನ್ನು ಎತ್ತಿ ತೋರಲು ಕಟ್ಟಿದುದಾಗಿರಬೇಕು.[43]

ಕೇತಲದೇವಿಯ ಎರಡು ವಚನಗಳು ಮಾತ್ರ ಈವರೆಗೆ ಲಭ್ಯವಾಗಿವೆ. ಒಂದು ವಚನದಲ್ಲಿ ತನ್ನ ವ್ಯಕ್ತಿ ಪರಿಭಾಷೆಯನ್ನು ಉಪಯೋಗಿಸಿ ವ್ರತಭ್ರಷ್ಟವನ್ನು ಬೆರೆಯಬಾರದೆಂದು ತಿಳಿಸಿದರೆ, ಇನ್ನೊಂದರಲ್ಲಿ ಲಿಂಗಾಚಾರಿಗಳ ಅಂಗಳಕ್ಕೆ ಹೋಗಿ ಲಿಂಗಾರ್ಪಿತ ಮಾಡುವಲ್ಲಿ ಸಂದೇಹವಿಲ್ಲದಿರಬೇಕೆಂದು ತಿಳಿಸುತ್ತಾಳೆ.

**ಗೊಗ್ಗವ್ವೆ**

ಕೇರಳದಿಂದ ಕಲ್ಯಾಣಕ್ಕೆ ಆಗಮಿಸಿ ಧೂಪದ ಕಾಯಕದೊಂದಿಗೆ ಶಿವಭಕ್ತೆಯಾಗಿ ವಿರಾಗಿಣಿಯಾಗಿ ಸಾಧನೆ ಮಾಡಿದ್ದಾಳೆ. ನಾಸ್ತಿನಾಥ ಎಂಬ ಅಂಕಿತದಿಂದ ವಚನಗಳನ್ನು ರಚಿಸಿದ್ದು ಈವರೆಗೆ ಆಕೆಯ ಆರು ವಚನಗಳು ಮಾತ್ರ ಲಭ್ಯವಾಗಿದ್ದು ಅವುಗಳಲ್ಲಿ ಗೊಗ್ಗವ್ವೆಯ ಭಕ್ತಿ, ಕಾಯಕ ನಿಷ್ಠೆ ವ್ಯಕ್ತವಾಗಿದೆ. ಪರಿಪೂರ್ಣ ಭಕ್ತನಾಗಬೇಕಾದರೆ ಗಂಡು ಹೆಣ್ಣೆಂಬ ಉಭಯ ಭಾವ ಕಳೆಯಬೇಕು ಎನ್ನುವ ಅಭಿಪ್ರಾಯ ಅವಳದು. ಗಂಡು ಹೆಣ್ಣಿನಲ್ಲಿರುವ ದೈಹಿಕ ಪ್ರಭೇದಗಳನ್ನು ಮುಂದೆ ಮಾಡಿ ಹೆಣ್ಣನ್ನು ಜ್ಞಾನ ಮಾರ್ಗಕ್ಕೆ ಆತ್ಮ ವಿದ್ಯೆಗೆ ಅನರ್ಹಳೆಂದು ಪರಿಗಣಿಸುವ ಸಮಾಜವನ್ನು ಪ್ರಶ್ನಿಸಿ ಸಮಾನತೆಯನ್ನು ಸೂಚ್ಯವಾಗಿ ಸಾರಿದ್ದಾಳೆ.

# ಅಡಿಟಿಪ್ಪಣಿಗಳು

1) Altekar A.A.: The Position of Women in Hindu Civilization, p-10
2) Altekar A.S. The Position of Women in Ancient Hindu Civilization, P-18
3) ಮಹಿಷಿ ಸರೋಜಿನಿ. ಕರ್ನಾಟಕದ ಕವಿಯತ್ರಿಯರು, ಪುಟ 10
4) ನರಸಿಂಹಚಾರ್ ಡಿ.ಎಲ್ (ಸಂ) ಆದಿಪುರಾಣ 8:58
5) ಎಲಿಗಾರ ಚೆನ್ನಕ್ಕ. ಶಾಸನಗಳಲ್ಲಿ ಕರ್ನಾಟಕ ಸ್ತ್ರೀ ಸಮಾಜ, ಪುಟ 82
6) ಆಚಾರ ವನಮಾಲಾ - ಸ್ತ್ರೀ ಮತ್ತು ಶಿಕ್ಷಣ ಪುಟ 22
7) ಚಂದ್ರಬಾಯಿ ಬಿ.ಪಿ. ಭಾರತೀಯ ಮಹಿಳಾ ಪರಂಪರೆ, ಪುಟ 5
8) ಮಹಿಷಿ ಸರೋಜಿ. ಕರ್ನಾಟಕದ ಕವಿಯಿತ್ರಿಯರು, ಪುಟ 10
9) I.A. Vol XV, 10 ಕ್ರಿ.ಶ. 1047
10) SII XVIII No. ಕ್ರಿ.ಶ. 1168
11) MAR 1943 BL 16 ಕ್ರಿ.ಶ. 1200
12) EI, Vol XVIII, 173, ಕ್ರಿ.ಶ. 1076
13) EI, Vol XVIII, 173, ಕ್ರಿ.ಶ. 1076
14) EI Vol XIX, 190 ಕ್ರಿ.ಶ. 1054
15) EC Vol-II SB 203 ಕ್ರಿ.ಶ. 1100
16) ಅದೇ ನಂ. 484 ಕ್ರಿ.ಶ. 1119
17) ಅದೇ ನಂ. 9, ಕ್ರಿ.ಶ. 800
18) EC, VI Kd 1 ಕ್ರಿ.ಶ. 971
19) EC II, 168 ಕ್ರಿ.ಶ. 971
20) 168, ಕ್ರಿ.ಶ. 1000
21) ನರಸಿಂಹಚಾರ್ಯ ಆರ್. ಶಾಸನ ಪದ್ಯಮಂಜರಿ ಪುಟ 14 ಕ್ರಿ.ಶ. 1119
22) ಕುಲಕರ್ಣಿ ಬಿ.ಎಸ್. ನಿರ್ವಾಣ ಸ್ಮಾರಣ ಸಂಚಿಕೆ, ಪುಟ 14
23) EI XII, P-102
24) MAR 1932-35 ಕ್ರಿ.ಶ. 1100

25) MAR 1942 ಕ್ರಿ.ಶ. 1013

26) EC II, Sb 374, ಕ್ರಿ.ಶ. 1118

27) EC bp No.- 65, ಕ್ರಿ.ಶ. 900

28) KI Vol-IV No.- ಕ್ರಿ.ಶ. 1109

29) ರಾಜಶೇಖರಪ್ಪ ಬಿ. ಇತಿಹಾಸ ಕಥನ ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು-2001

30) ಕಬ್ಬಿನ ಹಾಲು ಪುಟ 74

31) EC VII SK 217 ಕ್ರಿ.ಶ. 1158

32) SII IX Part-I, P. 145 ಕ್ರಿ.ಶ. 1080

33) ಅದೇ ಪುಟ 159, ಕ್ರಿ.ಶ. 1092

34) ಅದೇ

35) ಅದೇ 195, ಕ್ರಿ.ಶ. 1116 (ಹೆಚ್ಚಿನ ವಿವರಗಳಿಗೆ ಮಹಿಳೆ ಮತ್ತು ಆಡಳಿತ ಅಧ್ಯಾಯ ನೋಡಿ)

36) I.A. XVIII P 27075 ಕ್ರಿ.ಶ. 1022

37) SII XV 83 ಕ್ರಿ.ಶ. 1106

38) EC VIII sb 412, ಕ್ರಿ.ಶ. 1177

39) ಶೇಷಾಶಾಸ್ತ್ರಿ ಆರ್. ಕರ್ನಾಟಕದ ವೀರಗಲ್ಲುಗಳು ಪುಟ 80

40) SII XX No.23 ಕ್ರಿ.ಶ. 1029

41) Altekar A.S. The Position of Women in Hindu Civilization, P-17

42) ಪಾಂಡುರಂಗಿ, ಕೆ.ಟಿ. ಸಂಸ್ಕೃತ ಕವಿಯತ್ರಿಯರು, ಪುಟ 1

43) ರಾಜರ ವೀರಣ್ಣ ಶಿವಶರಣೆಯರ ವಚನ ಸಂಪುಟ 8, ಪುಟ 11

44) ಹಿರೇಮಠ ಆರ್.ಸಿ. ಶಿವಶರಣೆಯರ ವಚನಗಳು ವಚನ, ಪುಟ 234

45) ರಾಜೂರ ವೀರಣ್ಣ ಶಿವಶರಣೆಯರ ವಚನ ಸಂಪುಟ 9, ಪುಟ 319

46) ರಾಜೂರ ವೀರಣ್ಣ, ಶಿವಶರಣೆಯರ ವಚನ ಸಂಪುಟ 7, ಪುಟ 217

# ಅಧ್ಯಾಯ 6
# ಮಹಿಳೆ ಮತ್ತು ಲಲಿತಕಲೆಗಳು

ಕರ್ನಾಟಕವು ಕಲೆಗಳ ತವರೂರಾಗಿದ್ದು, ರಾಜರಿಂದ ಪ್ರೋತ್ಸಾಹವನ್ನು ಪಡೆದುಕೊಂಡು ಬೆಳವಣಿಗೆಯನ್ನು ಹೊಂದಿದೆ. ಇದು ನಮ್ಮ ಸಂಸ್ಕೃತಿಯ ಸಂಕೇತ ಮತ್ತು ಸಾಕ್ಷಾತ್ಕಾರವಾಗಿದೆ. ಕಲೆ ಇದ್ದಂತೆ ನಾಗರೀಕತೆ, ನಾಗರೀಕತೆ ಇದ್ದಂತೆ ಕಲೆ. ನಾಗರೀಕತೆಯ ಅಡಿಗಲ್ಲು ಜನತೆಯ ಚಾರಿತ್ರ್ಯ. ಈ ರೀತಿ ಒಂದನ್ನೊಂದು ಅವಲಂಬಿಸಿರುವ ಕತೆಯ ಮಹತ್ಕೃತಿಗಳಿಗೆ ಶಾಶ್ವತ ಬೆಲೆಯಿದೆ ಇಂತಹ ಕಲೆಗಳು ಹಲವು.

ಸಂಸ್ಕೃತ ಸಾಹಿತ್ಯದ ಅನೇಕ ಕೃತಿಗಳು ಮತ್ತು ಬೌದ್ಧ ಜೈನ ಗ್ರಂಥಗಳು ಕಲೆಗಳ ಬಗ್ಗೆ ಉಲ್ಲೇಖಿಸುತ್ತವೆ. ಭಾರತೀಯರು ಕಲೆಗಳು ಅರವತ್ತನಾಲ್ಕು ಎಂದು ಬಹು ಹಿಂದಿನಿಂದಲೂ ಒಪ್ಪಿಕೊಂಡು ಬಂದಿರುವರು. ವಾತ್ಸ್ಯಾಯನನ ಕಾಮಸೂತ್ರದಲ್ಲಿರುವ ಅರವತ್ತನಾಲ್ಕು ಕಲೆಗಳು ಕೆಳಗಿನಂತಿವೆ.

1) ಗೀತಂ
2) ವಾದ್ಯಂ
3) ನೃತ್ಯಂ
4) ಅಲೇಖ್ಯಂ
5) ವಿಶೇಷಕಚ್ಛೇದ್ಯಂ
6) ತಂಡುಲಕುಸುಮ ಒಲಿವಿಕಾರಃ
7) ಕಾಚುಮಾರಶ್ಚಯೋಗಾಃ
8) ಹಸ್ತಲಾಘವಂ
9) ವಿಚಿತ್ರಶಾಕಯೂಷಭಕ್ಷ್ಯವಿಕಾರಕ್ರಿಯಾ
10) ಪಾನಕರ ಸರಾಗಾಸವಯೋಜನಂ
11) ಸೂಚೀವಾನಕರ್ಮಣಿ
12) ಸೂತ್ರಕ್ರೀಡಾ
13) ವೃಕ್ಷಾಯುರ್ವೇದಯೋಗಾಃ
14) ಮೇಷಕುಕ್ಕುಟಲಾವಕಯುದ್ಧ ವಿಧಿಃ

15) ಶುಕಸಾರಿಕಾಪ್ರಲಾಪನಂ

16) ಉತ್ಸಾದನೇ ಸಂವಾಹನೇ

17) ಕೇಶಮರ್ದನೇಚ ಕಾಶಲಂ

18) ಅಕ್ಷರ ಮುಷ್ಟಿಕಾಕಥನಂ

19) ಪುಷ್ಪಸ್ತರಣಂ

20) ದಶನವಸನಾರೂರಾಗಃ

21) ಮಣಿಭೂಮಿಕಾಕರ್ಮ

22) ಶಯನರಚನಂ

23) ಉದಕವಾದ್ಯಂ

24) ಉದಕಘಾತಃ

25) ಚಿತ್ರಶ್ಚಯೋಗಾಃ

26) ಮಾಲ್ಯಗ್ರಥನವಿಕಲ್ಪಾಃ

27) ಶೇಖರಕಾಪೀಡಯೋಜನಂ

28) ನೇಪಥ್ಯಪ್ರಯೋಗಾಃ

29) ಕರ್ಣಪತ್ರಭಂಗಃ

30) ಗಂಧಯುಕ್ತಿಃ

31) ಭೂಷಣಯೋಜನಂ

32) ಇಂದ್ರಜಾಲಯೋಗಾಃ

33) ವೈನಯಿಕೀನಾಂ ವಿದ್ಯಾನಾಂ ಜ್ಞಾನಂ

34) ಬಾಲಕ್ರೀಡನಕಾನಿ

35) ವೀಣಾಡಮರುಕವಾದ್ಯಾನಿ

36) ಪ್ರಹೇಲಿಕಾ

37) ದುರ್ವಾಚನಯೋಗಾ

38) ಪುಸ್ತಕವಾಚನಂ

39) ನಾಟಕಾಖ್ಯಾಯಿಕಾದರ್ಶನಂ

40) ಕಾವ್ಯಾಸಮಸ್ಯಾಪೂರಣಂ

41) ಪಟ್ಟಿಕಾವೇತ್ರವಾನವಿಕಲ್ಪಾಃ

42) ತಕ್ಷಕರ್ಮಾಣಿ

43) ತಕ್ಷಣಂ

44) ವಾಸ್ತುವಿದ್ಯಾ

45) ರೂಪ್ಯರತ್ನ ಪರೀಕ್ಷಾ

46) ಧಾತುವಾದಃ

47) ಮಣಿರಾಣಾಕರಜ್ಞಾನಂ

48) ವೈಜಯಿಕೀನಾಂ ವಿದ್ಯಾನಾಂ ಜ್ಞಾನಂ

49) ಮ್ಲೇಚ್ಛಿತಕಲ್ಪಾಃ

50) ದೇಶಭಾಷಾವಿಜ್ಞಾನಂ

51) ಪುಷ್ಪಶಕಟಿಕಾ

52) ನಿಮಿತ್ತಜ್ಞಾನಂ

53) ಯಂತ್ರಮಾತೃಕಾ

54) ಧಾರಣಮಾತೃಕಾ

55) ಸಂಪಾರ್ಠ್ಯಂ

56) ಮಾನಸೀ

57) ಕಾವ್ಯಕ್ರಿಯಾ

58) ಅಭಿದಾನಕೋಶ ಛಂದೋವಿಜ್ಞಾನಂ

59) ಕ್ರಿಯಾಕಲ್ಪಃ

60) ಛಲಿತಕಯೋಗಾಃ

61) ವಸ್ತ್ರಗೋಪನಾನಿ

62) ದ್ಯೂತವಿಶೇಷಾಃ

63) ಆಕರ್ಷಕ್ರೀಡಾ

64) ವ್ಯಾಯಾಮಿಕೀನಾಂ ವಿದ್ಯಾನಾಂಜ್ಞಾನಂ

### 6.1 ಲಲಿತ ಕಲೆಗಳು

ನಿತ್ಯ ಜೀವನದ ಜಂಜಾಟದಲ್ಲಿ ಜಡ್ಡುಗಟ್ಟಿದ ಮನಸ್ಸನ್ನು ಉಲ್ಲಾಸಗೊಳಿಸತಕ್ಕವು ಲಲಿತ ಕಲೆಗಳು. ಇವುಗಳ ಮುಖ್ಯ ಗುರಿ ಮನೋರಂಜನೆ, ಸಾಹಿತ್ಯ, ಸಂಗೀತ, ನೃತ್ಯ, ನಾಟಕ, ಶಿಲ್ಪ ಇವು ಜನರನ್ನು ರಮಿಸುವ ಹಾಗೂ ಉತ್ಸಾಹಿಗಳನ್ನಾಗಿ ಮಾಡುವ ಲಲಿತ ಕಲೆಗಳಾಗಿವೆ. ಇವು ಜನಜೀವನದಲ್ಲಿ ಪ್ರಭಾವ ಬೀರುವುದಲ್ಲದೆ, ಸಮಾಜದ ಕೈಗನ್ನಡಿಯಾಗಿಯೂ ತೋರುತ್ತದೆ. ಕಲೆಗಳು ವ್ಯಕ್ತಿಯ ಮನಸ್ಸಿನ ಬೇಸರವನ್ನು ಹೋಗಲಾಡಿಸಿ, ಹೊಸತನವನ್ನು ಹುಡುಕಲು ಪ್ರಚೋದಿಸುತ್ತವೆ. ಇವು ಮಾನವನ ಜೀವನದಲ್ಲಿ ಹಾಸು ಹೊಕ್ಕಾಗಿವೆ. ಈ ಲಲಿತ ಕಲೆಗಳಲ್ಲಿ ಮಹಿಳೆಯರು ಕೌಶಲ್ಯ ಪಡೆದಿರುವುದು ಹಿಂದಿನ ಹಾಗೂ ಇಂದಿನ ಕಾಲದಲ್ಲೂ ಪ್ರಸಿದ್ಧ ಸಂಗತಿಯಾಗಿದೆ. ಮಹಿಳೆಗೆ ಸಹಜವಾದ ಕೋಮಲತೆ, ಮಧುರತೆ ಹಾಗೂ ಉತ್ಸಾಹ ಪ್ರವೃತ್ತಿಗಳಿಂದಾಗಿ, ಸಂಗೀತ, ಗೃಹಕಲೆ, ನೃತ್ಯ ಕಲೆಗಳು ಅವರಿಗೆಂದೇ ಸೃಷ್ಟಿಸಿದಂತಿವೆ. ಚಿತ್ರಕಾರನಿಗೆ ಶಿಲ್ಪಿಗೆ ರೂಪದರ್ಶಿಯಾದ ಮಹಿಳೆ, ಆ ಕಲೆಗಳಿಗೂ ಸ್ಫೂರ್ತಿಯಾಗಿ, ಈ ಲಲಿತ ಕಲೆಗಳು ಎಂದಿಗೂ ಮಾಸದಂತಿರಲು ಕಾರಣಳಾಗಿದ್ದಾಳೆ ಎನ್ನಬಹುದು.

**ಸಂಗೀತ**

"ಗೀತಂವಾದ್ಯಂತಥಾ ನೃತ್ಯಂತ್ರಯಂ ಸಂಗೀತ ಮುಚ್ಯತೆ" ಅಂದರೆ ಗೀತ, ವಾದ್ಯ ನೃತ್ಯಗಳು ಕೂಡಿದ್ದು ಸಂಗೀತವೆಂದು ಕರೆಯಲ್ಪಡುತ್ತದೆ. ಗೀತವೆಂದರೆ ಹಾಡುವುದು, ವಾದ್ಯವೆಂದರೆ ಬಾರಿಸುವುದು, ನೃತ್ಯವೆಂದರೆ ಕುಣಿಯುವುದು. ಇವು ಮೂರೂ ಏಕಕಾಲದಲ್ಲಿಯೇ ತಾಕಕ್ರಿಯೆ ಗನುಸರಿಸಿ ನಡೆದರೆ ಸಂಗೀತವಾಗುವುದು. ಸಂಗೀತವು ಜೀವಮಾನವೆಲ್ಲ ರಸಮಯವನ್ನಾಗಿ ಮಾಡುತ್ತದೆ. ಇಂತಹ ಸಂಗೀತವು ಮಾನವ ಸೃಷ್ಟಿಗಿಂತಲೂ ಮೊದಲೇ ಸೃಷ್ಟಿಯಾಯಿತಂತೆ!!

ಸಂಗೀತ ಕಲೆಯು ಒಂದು ಸಂಸ್ಕೃತಿಯಿಂದ ಮತ್ತೊಂದು ಸಂಸ್ಕೃತಿಗೆ ಸಂಬಂಧ ಕೂಡಿಸುವ ನೇರವಾದ ಸಂಪರ್ಕವೂ ಹೌದು ಕಲೆಗಳಲ್ಲೆಲ್ಲಾ ಉನ್ನತಮಟ್ಟವನ್ನು ಹೊಂದಿ ಮಾನವನ ಮತ್ತು ನಾಡಿನ ಸಾಂಸ್ಕೃತಿಕ ಮಟ್ಟವನ್ನು ಅಭಿವೃದ್ಧಿಪಡಿಸಲು ಸಹಕಾರಿಯಾಗಿ ನಿರ್ವಹಿಸಲು ಸಂಗೀತವು ಮಹೋನ್ನತ ಪಾತ್ರವನ್ನು ವಹಿಸಿದೆ. ಇದು ಲಲಿತಕಲೆಗಳಲ್ಲಿ ಒಂದು ಕಲೆಯಾದರೂ ಕಲೆಗಳ ಕಲೆ ಅಥವಾ ಶ್ರೇಷ್ಠವಾದ ಕಲೆ ಎಂದು ಪ್ರಸಿದ್ಧವಾಗಿದೆ.

# ಅಧ್ಯಾಯ 7
# ಮಹಿಳೆ ಮತ್ತು ಧರ್ಮ

"ಸತಿ–ಪತಿಗಳೊಂದಾದ ಭಕ್ತಿ ಹಿತೆ ಒಪ್ಪುವುದು ಶಿವಂಗೆ" ಎಂಬ ಶರಣರ ನುಡಿಯಂತೆ, ಯಾವುದೇ ಧಾರ್ಮಿಕ ಕಾರ್ಯವನ್ನು ಮಾಡಿದರೂ, ಅದು ಒಳ್ಳೆಯದೇ ಆಗಿರಲಿ ಕೆಟ್ಟದ್ದೇ ಆಗಿರಲಿ ಇಬ್ಬರೂ ಕೂಡಿ ಮಾಡುವುದು ಯೋಗ್ಯ ಎಂಬುದನ್ನು ನಮ್ಮ ಪ್ರಾಚೀನರು ನಂಬಿದ್ದರು, ಅದರಂತೆ ನಡೆದುಕೊಂಡಿದ್ದು, ಈಗಲೂ ಆ ಸಂಪ್ರದಾಯವು ಮುಂದುವರೆದಿರುವುದನ್ನು ಕಾಣುತ್ತೇವೆ. ರಾಮಾಯಣದಲ್ಲಿ ಸೀತೆಯನ್ನು ಕಾಡಿಗೆ ಕಳುಹಿಸಿದ ಮೇಲೆ ರಾಮನು ಅಶ್ವಮೇದ ಯಾಗದಲ್ಲಿ ತೊಡಗಬೇಕಾದಾಗ ಪುರೋಹಿತರು ಪಕ್ಕದಲ್ಲಿ ಸೀತಾಮಾತೆ ಬೇಕೆಂದಾಗ ಒಂದು ಸ್ತ್ರೀ ರೂಪವನ್ನು ರಾಮನ ಪಕ್ಕದಲ್ಲಿ ಮಾಡಿರುವುದನ್ನು ನೋಡಿದಾಗ[1] ಯಜ್ಞ–ಯಾಗಾದಿಗಳನ್ನು ಮಾಡುವಾಗ ಪುರುಷರಷ್ಟೇ ಸ್ತ್ರೀಯು ಪ್ರಾಮುಖ್ಯತೆಯನ್ನು ಪಡೆದಿರುವುದನ್ನು ಕಾಣುತ್ತೇವೆ. ಇನ್ನು ನಾಮಕರಣ, ಚೂಡಾಕರ್ಮ, ಉಪನಯನ, ಮದುವೆಯಂತಹ ಸಂಸ್ಕಾರಗಳಲ್ಲಿಯೂ ಸ್ತ್ರೀಯರೆ ಮೇಲುಗೈ ಸಾಧಿಸಿದ್ದು, ಸಾಧಿಸುತ್ತಿರುವುದನ್ನು ಈಗಲೂ ಕಾಣುತ್ತೇವೆ. ಹೀಗೆ ರಾಜಕೀಯಕ್ಕಿಂತಲೂ ಧಾರ್ಮಿಕ ಕ್ಷೇತ್ರದಲ್ಲಿ ಮಹಿಳೆಯು ಸುಲಭವಾಗಿ ಭಾಗವಹಿಸಬಹುದಾದಂತಹ ಕ್ಷೇತ್ರವಾಗಿದ್ದು ಇದಕ್ಕೆ ಚಾಲುಕ್ಯ ರಾಣಿಯರು ಹೊರತಾಗಿರಲಿಲ್ಲ.

ಚಾಲುಕ್ಯ ರಾಣಿಯರಲ್ಲಿ ಕಾಣುವ ಒಂದು ವಿಶೇಷವಾದ ಗುಣವೆಂದರೆ ಧರ್ಮ ಸಮನ್ವಯತೆಯನ್ನು ಕಾಪಾಡಿಕೊಂಡು ಬಂದಿರುವುದು. ತ್ರಿಮೂರ್ತಿಗಳಿಗೂ, ತ್ರಿಮತಿಸ್ಥರಿಗೂ ವಿಶೇಷವಾದ ಮುನ್ನಡೆ ದೊರೆತಿರುವುದನ್ನು ಕಾಣುತ್ತೇವೆ. ಕ್ರಿ.ಶ. 1019ರ ಬಳ್ಳಿಗಾವೆಯ ಶಾಸನವೊಂದು[2]

"ಶ್ರೀಪತಿ ಚಕ್ರಧಾರಿ ಗರುಡಾಸನನೆಂಬುರುದಾಕ್ಷನದ್ರಿಜಾ
ತಾಪತಿ ಶೂಲಧಾರಿ ವೃಷಭಾಸನನಭ್ಯಧೀಕ್ಷೇಣಂ ವಚ
ಶ್ರೀಪತಿ ಪಾಶಧಾರಿ ಕಳಹಂಸಗನಷ್ಟಮಿತಾಕ್ಷನೆಂದಿವರ್
ತ್ರೈಪುರುಷರ ತ್ರಿಲೋಕ ಜನಪೂಜಿತರೀಗೆಮಗಿಷ್ಟೆಸಿದ್ದಿಯ"

ಎಂದು ಹೇಳಿದೆ. ಇದರಿಂದ ತ್ರಿಮೂರ್ತಿಗಳ ಸಮಾನತೆಯನ್ನು ತೋರಿಸುತ್ತದೆ. ಅಲ್ಲದೇ ರಾಣಿಯರು ತ್ರಿಮೂರ್ತಿಗಳಿಗಾಗಿ ದೇವಾಲಯಗಳನ್ನು ನಿರ್ಮಿಸಿರುವುದು ಸಹ ಕಂಡುಬರುತ್ತದೆ. ಇದರ ಮೊಟ್ಟ

ಮೊದಲ ಉದಾಹರಣೆಯು ಬಾದಾಮಿ ಚಾಲುಕ್ಯರ ವಿನಯಾದಿತ್ಯನ ರಾಣಿ ವಿನಯವತಿಯು ಬಾದಾಮಿಯಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರನ್ನೊಳಗೊಂಡು 'ತ್ರಿಕೂಟ ದೇವಾಲಯ'ವನ್ನು ನಿರ್ಮಿಸಿದಳು.

ಚಾಲುಕ್ಯ ದಶವರ್ಮ ಭಾಗಲದೇವಿಯರ ಮಗಳು ಕದಂಬ ಮಯೂರವರ್ಮನ ರಾಣಿಯಾದ ಅಕ್ಕಾದೇವಿಯು ಸಹ ಸರ್ವಧರ್ಮಗಳ ಸಂರಕ್ಷಣೆಯನ್ನು ಮಾಡಿದಳೆಂದು ಕ್ರಿ.ಶ. 1022 ಬೇಲೂರಿನ ಶಾಸನವೊಂದು[3] ಇಂತು ಹೇಳಿದೆ. "ಜಿನಬುದ್ಧಾನಂತ ರುದ್ರಾಗಮ ನಿಗದಿತ ಧರ್ಮಂಗಳ ಮಾಡಿಸು" ಪುರಮೂರ್ತಿ ಅವಳ ಜಿನ, ಬೌದ್ಧ, ಅನಂತ ಮತ್ತು ರುದ್ರರಿಗೆ ಸಂಬಂಧಪಟ್ಟ ಧರ್ಮಗಳನ್ನು ಪೋಷಣೆ ಮಾಡಿದ ಉಲ್ಲೇಖವಿದೆ. ಹೀಗಾಗಿ ಇವಳು ಸರ್ವಧರ್ಮಗಳ ಸಂರಕ್ಷಕಳಾಗಿ ಕಿಸುಕಾಡು-70, ಬಾಗಡಗೆ 70, ತೊರಗಲೆ 60 ಹಾಗೂ ಮಾಸೆಯವಾಡಿ 140 ವಿಭಾಗಗಳ ಆಳ್ವಿಕೆ ನಿರ್ವಹಿಸಿದಳು. ಆರನೆಯ ವಿಕ್ರಮಾದಿತ್ಯನು ಹಲವಾರು ಮತದ ಮಹಿಳೆಯರನ್ನು ಮದುವೆಯಾಗುವುದರ ಮೂಲಕ ಅಪ್ರತ್ಯಕ್ಷವಾಗಿ ಆಯಾ ಮತಗಳನ್ನು ಪೋಷಿಸಿರುವ ಸಾಧ್ಯತೆಯಿದೆ. ಅಲ್ಲದೇ ಅದರಿಂದ ಪ್ರಜೆಗಳಲ್ಲಿ ಧರ್ಮ ಸಮನ್ವಯತೆಯು ಮೂಡಿರಲು ಸಾಕು. ಅವನ ರಾಣಿಯರಲ್ಲಿ ಲಕ್ಷ್ಮೀದೇವಿಯು ಪ್ರಮುಖಳಾದವಳು. ಚಾತುರ್ವರ್ಣಗಳಲ್ಲಿ ಭಾಗವಹಿಸಿದ ಲಕ್ಷ್ಮೀ ದೇವಿಯನ್ನು ಕ್ರಿ.ಶ. 1080ರ ಮುಂಡರಗಿ ತಾಲೂಕಿನ ಡೋಣಿಯ ಶಾಸನವೊಂದು[4].

"ಯುವತೀಮುಖತಿಳಕಂ ಲೋ
ಲವಿಲೋಚನೆ ಸವತಿಗಂಧ ಹಸ್ತಿ ಮಹಾದಾ
ನವಿನೋದೆಯೆನಿಸಿ ನೆಗಳ್ದಳ್
ಭುವದೊಳೆ ಪುರಾಣಲಕ್ಷ್ಮೀ ಲಕ್ಷ್ಮೀದೇವಿ".

ಎಂಬ ಉಕ್ತಿಯು ಸಮಂಜಸವೆನಿಸುತ್ತದೆ. ಇವಳು ಕ್ರಿ.ಶ. 1096ರಲ್ಲಿ ಡೋಣಿಯನ್ನಾಳುತ್ತಿದ್ದಾಗ ಸೋಕಸೆಟ್ಟಿ ಎಂಬುವವನ ಬಸದಿಗೆ ಇವಳು ದಾನಕೊಟ್ಟು ಜೈನಧರ್ಮವನ್ನು ಪೋಷಿಸಿದಳು. ಬಸದಿಗೆ ಇವಳು ದಾನಕೊಟ್ಟು ಜೈನಧರ್ಮವನ್ನು ಪೋಷಿಸಿದಳು. ಕ್ರಿ.ಶ. 1084ರ ಶಾಸನವೊಂದು.[5] ಲಕ್ಷ್ಮೀದೇವಿಯು ಸೊಂಡಿಯ ಮೇಲ್ವಿಚಾರಣೆ ಮಾಡುತ್ತಿದ್ದಾಗ ಅಲ್ಲಿರುವ ಅಚಲೇಶ್ವರದ ಸೋಮೇಶ್ವರ ಪಂಡಿತರಿಗೆ ಅಲ್ಲಿ ಅಧ್ಯಯನ ಮಾಡುತ್ತಿದ್ದ ತಪೋಧರ್ಮ ಆಹಾರ ವಿದ್ಯಾದಾನಕ್ಕೆ

ದೇವರಂಗ ಭೋಗಕ್ಕೆ ಕಿಸುಕಾಡು 70ರ ಬಳಿಯ ಪೊಲಗರಿ ಎಂಬ ಗ್ರಾಮವನ್ನು ದಾನ ಯಿಟ್ಟಿರುವುದನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. 1095ರ ಡಂಬಳ ಶಾಸನದ ಪ್ರಕಾರ[6] ಲಕ್ಷ್ಮಾದೇವಿಯು ಹದಿನೆಂಟು ಅಗ್ರಹಾರ ಧರ್ಮಪುರದ ಆಳ್ವಿಕೆಯ ಸಮಯದಲ್ಲಿ ಧರ್ಮಪೊಳಲದ ಹದಿನಾರು ಜನ ಸೆಟ್ರಿಮಹಾನಗರರು ಬೌದ್ಧವಿಹಾರ ಮತ್ತು ಲೊಕ್ಕಿಗುಂಡಿಯ ವಡ್ರ ವ್ಯವಹಾರ ಸಂಗಯ್ಯಶೆಟ್ಟಿಯವರು ಮಾಡಿಸಿದ ಭಗವತಿ ಆರ್ಯತಾರಾದೇವಿ ವಿಹಾರಕ್ಕೆ ಅಲ್ಲಿಯ ಬುದ್ಧ ದೇವರಿಗೆ ಪೂಜಾ, ಸತ್ಕಾರ, ನೈವೈದ್ಯ, ಭಿಕ್ಷುಗಳಿಗೆ ದಾನ ಬಿಟ್ಟುಕೊಟ್ಟಿರುವರು. ಇದರಿಂದ ಲಕ್ಷ್ಮಾದೇವಿಯ ಕಾಲದಲ್ಲಿ ಬೌದ್ಧಧರ್ಮವು ಸಹ ಇದ್ದುದು ಸ್ಪಷ್ಟವಾಗುತ್ತದೆ. ಇದರಿಂದ ಅವಳು ಸರ್ವಧರ್ಮಗಳನ್ನು ಪೋಷಿಸಿದಳು ಎಂದು ಗೊತ್ತಾಗುತ್ತದೆ. ಹೀಗೆ ರಾಣಿಯರು ಸರ್ವಧರ್ಮಗಳ ಪೋಷಾಣಿಯ ಸಾಕಾರ ಮೂರ್ತಿ ಗಳಾಗಿದ್ದರು.

### 7.1 ಬೌದ್ಧಧರ್ಮ

ಉತ್ತರದಲ್ಲಿ ಜನ್ಮ ತಾಳಿದ ಬೌದ್ಧಧರ್ಮವು ದಕ್ಷಿಣ ಪಥದತ್ತ ಯಾವಾಗ ಪಸರಿಸಿತು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಅಶೋಕ ನಂತರ ಬಂದಿತೆಂದು ಕೆಲವರು ಹೇಳಿದರೆ ಅಶೋಕನಿಗಿಂತ ಪೂರ್ವದಲ್ಲಿಯೇ ಬೌದ್ಧರಿಗೆ ದಕ್ಷಿಣ ಪಥದ ಪರಿಚಯವಿದ್ದಿತೆಂಬುದಕ್ಕೆ ಪ್ರಾಚೀನ ಬೌದ್ಧ ಸಾಹಿತ್ಯದಲ್ಲಿ ಅನೇಕ ಆಧಾರಗಳಿವೆ.[7] ಬೌದ್ಧ ಪಾಲಿ ಸಾಹಿತ್ಯದಲ್ಲಿ ಉಲ್ಲೇಖ ಗೊಂಡಿರುವ ತಗರಶಿಖಿನ್ ಎಂಬ ಗುರುದಿನ ಮೂಲ ತಗರನಾಡು ಅಥವಾ ಥೇರ್ ಇರಬಹುದು ಎಂಬ ಅಭಿಪ್ರಾಯವಿದೆ. ಈ ತಗರ ಇದು ಗೋಕರ್ಣದ ಬಳಿಯ ಈಗಿನ ತೊರ್ಕೆ ಎಂಬ ಅಭಿಪ್ರಾಯವೂ ಇದೆ.[8]

### 7.2 ಜೈನಧರ್ಮ

ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮ ಒಂದು ಪ್ರಬಲವಾದ ಧರ್ಮವಾಗಿತ್ತು. ಡಾ.ಬಿ.ಎ.ಸಾಲೆತೊರೆಯವರು ಅಭಿಪ್ರಾಯ ಪಟ್ಟಿರುವಂತೆ ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ.[9] ಕರ್ನಾಟಕದಲ್ಲಿಯ ಜೈನ ಧರ್ಮದ ವ್ಯಾಪ್ತಿಯನ್ನು ಶಾಸನವೊಂದು ಹೀಗೆ ವರ್ಣಿಸಿದೆ.

"ಜಿನಧರ್ಮಾವಾಸಮಾದತ್ತಮಳ ವಿನಯದಾಗಾರಮಾದತ್ತ ಪದ್ಮಾ
ಸನನಿರ್ವಾಸದ್ಮಮಾದತ್ತಲೆ ವಿಶದಯ ಶೋಧಾಮಮಾದತ್ತು ವಿದ್ಯಾ
ಧನಜ್ಮಸ್ಥಾನ ಮಾದತ್ತ ಸಮತರಳ ಗಂಭೀರ ಸದ್ಗೇಹಮಾದ
ತ್ರೆನಿ ಸಲ್ಕಿಂತುಳ್ಳ ನಾನಾ ಮಹಿಮೆಯೊಳೆಸೆಗುಂ ಚಾರು ಕರ್ನಾಟದೇಶಂ"[10]

ಹೀಗೆ ಪ್ರಬಲವಾಗಿ ಜೈನಧರ್ಮವು ಕರ್ನಾಟಕಕ್ಕೆ ಯಾವಾಗ ಬಂದಿತೆಂಬುವುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಮಹಾವೀರನಿಂದ ಪ್ರವರ್ಧಮಾನಕ್ಕೆ ಬಂದು ಉತ್ತರ ಭಾರತದ ತುಂಬೆಲ್ಲ ಹರಡಿದಂತೆ ಈ ಧರ್ಮವು ದಕ್ಷಿಣ ಭಾರತಕ್ಕೆ ಮೌರ್ಯ ಚಂದ್ರಗುಪ್ತನಿಂದ ಕಾಲಿರಿಸಿ, ಇಲ್ಲಿ ಭದ್ರವಾಗಿ ನೆಲೆಯೂರಿತು. ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಉತ್ತರ ಭಾರತದಲ್ಲಿ 12 ವರ್ಷ ಕ್ಷಾಮ ತಲೆದೋರಲು ಮೌರ್ಯ ಚಂದ್ರಗುಪ್ತನು ಅವನ ಗುರುವಾದ ಭದ್ರಬಾಹುಗಳು ತಮ್ಮ ಶಿಷ್ಯರೊಂದಿಗೆ ಶ್ರವಣಬೆಳಗೊಳಕ್ಕೆ ಬರುವುದರೊಂದಿಗೆ ದಕ್ಷಿಣ ಭಾರತದಲ್ಲಿ ಜೈನ ಧರ್ಮವು ನೆಲೆಯೂರಿತು.[11]

### 7.3 ವೈದಿಕಧರ್ಮ

ವೇದಗಳನ್ನು ಶ್ರಮಿಸಿ ಹುಟ್ಟಿದುವೆಲ್ಲ ವೈದಿಕ ಧರ್ಮಗಳು. ಇದರಲ್ಲಿ ಶಿವನನ್ನು ನಂಬಿ ಆ ನಂಬಿಕೆಯಿಂದ ರೂಪುಗೊಂಡ ಬದುಕಿನ ಕ್ರಮವನ್ನು ಅನುಸರಿಸುವವರು ಶೈವರು. ಅವರ ಬದುಕಿನ ಕ್ರಮಕ್ಕೊಂದು ರೀತಿಯಿದೆ, ಸಿದ್ಧಾಂತವಿದೆ, ಅನುಷ್ಠಾನದ ಮಾರ್ಗವಿದೆ, ಅದು ಶೈವಮತ ಹಾಗೆಯೇ ವಿಷ್ಣುವನ್ನು ನಂಬಿ ಆರಾಧಿಸುವವರು ವೈಷ್ಣವರು ಇವರನ್ನೇ ಭಾಗವತರೆಂದು, ಶ್ರೀ ವೈಷ್ಣವರೆಂದು ಕರೆಯುತ್ತಾನೆ.

ತಮ್ಮ ನಂಬಿಕೆ ಮತ್ತು ಧರ್ಮಗಳನ್ನು ಬಲಪಡಿಸಿಕೊಳ್ಳಲು ಜನತೆ ಶ್ರಮಿಸುತ್ತದೆ. ಬಲವರ್ಧನೆಗೆ ಹತ್ತೆಂಟು ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುತ್ತ, ಜನಪ್ರಿಯವಾಗಲು ಪ್ರಯತ್ನಿಸು ತ್ತಿರುವುದನ್ನು ಕಾಣುತ್ತೇವೆ. ತನ್ನನ್ನು ಟೀಕಿಸಿದ, ನಿಂದಿಸಿದ ಜನರ ವಿರುದ್ಧ ಹೋರಾಡುತ್ತಿದೆ. ದೇವಾಲಯಗಳು ದೇವರ ಹೆಸರಿನಲ್ಲಿ ನಿರ್ಮಾಣವಾದರೂ, ಆ ದೇವರ ಹೆಸರಿನಲ್ಲಿ ಒಂದು ಧರ್ಮ ಬೆಳೆದುದರಿಂದ ದೇವಾಲಯಗಳು ಧರ್ಮವನ್ನೂ, ಧರ್ಮವು ದೇವಾಲಯಗಳನ್ನೂ ರಕ್ಷಿಸಲು ಮತ್ತು ಪೋಷಿಸಲು ಬದ್ಧವಾಗಿದ್ದುವು.

**7.4 ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ ನೀಡಿದ ದಾನ**

ರಾಣಿಯರು ದೇವಾಲಯಗಳನ್ನು ನಿರ್ಮಿಸಿ ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಾನಾಚಾರ್ಯರಿಗೆ ದಾನ ಕೊಟ್ಟಿರುವುದರೊಂದಿಗೆ ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ ಹಲವಾರು ಮಹಿಳೆಯರು ದಾನವನ್ನು ನೀಡಿ ಧರ್ಮದ ಪೋಷಣೆಯನ್ನು ಮಾಡಿದ್ದಾರೆ. ಉನ್ನತ ವರ್ಗದ ಮಹಿಳೆಯರೊಂದಿಗೆ ಸಾಮಾನ್ಯ ಮಹಿಳೆಯರು ಸಹ ದಾನ ನೀಡಿದ್ದಾರೆ. ಒಂದನೆಯ ಸೋಮೇಶ್ವರನ ರಾಣಿ ಮೈಳಲದೇವಿಯು ಕ್ರಿ.ಶ. 1048ರಲ್ಲಿ ಪತಿ ತ್ರೈಲೋಕ್ಯಮಲ್ಲ, ಪ್ರಧಾನಿ ಬಲ್ಲವರಸ, ಬೊಂತಾದೇವ, ನಯರ ಚಿದ್ದಯ್ಯರ ಸಮಕ್ಷಮದಲ್ಲಿ ಭತ್ರಗ್ರಾಮ ಹೊನವಾಡಿಯ ಸೋಮೇಶ್ವರ ದೇಗುಲದ ಜೀರ್ಣೋದ್ಧಾರ ದೇವಭೋಗಕ್ಕೆ ಚಂದಯ್ಯಭಟ್ಟರಿಗೆ ದತ್ತಿ ಬಿಡಿಸಿ ಕೊಟ್ಟಿರುವಳು.[12] ಅವನ ಇನ್ನೊಬ್ಬ ರಾಣಿ ಕೇತಲದೇವಿಯು ಕ್ರಿ.ಶ. 1062ರಲ್ಲಿ ಹೊನ್ನವಾಡದ ಸಿದ್ದೇಶ್ವರ ದೇವರಿಗೆ ಖಂಡಸ್ಫುದಿತ ಜೀರ್ಣೋದ್ಧಾರ ನಿವೇಧ್ಯಕ್ಕೆ ಇಪ್ಪತ್ತೈದು ಮತ್ತರ ಭೂಮಿ, ಗಾಣ, ಒಂದು ತೋಟವನ್ನು ದತ್ತಿ ಬಿಟ್ಟಿರುವಳು.[13] ಭುವನೈಕಮಲ್ಲರು ಆಳುತ್ತಿದ್ದಾಗ ಅವನ ಪತ್ನಿ (ಹೆಸರು ಇಲ್ಲಾ) ಯು ಎಡತೊರೆ ಎರಡು ಸಾವಿರದ ಗ್ರಾಮವೊಂದರಲ್ಲಿ ಸ್ವಯಂ ಭೂ ಮೂಲಸ್ಥಾನ ದೇವಾಲಯಕ್ಕೆ ಅದರ ಜೀರ್ಣೋದ್ಧಾರ, ತಪೋಧನರ ಆಹಾರ ಧಾನ್ಯ, ವಾದ್ಯ ಮುಂತಾದವಕ್ಕೆ 42 ಗೇಣುಗಳೆಯಲ್ಲಿ ಅಳೆದು 50 ಮತ್ತಾರು ಕರಿತಕಯನೆಲವನ್ನು ಬೀಡುತ್ತಾಳೆ ಅಲ್ಲದೆತ 200 ಕಮ್ಮಗದ್ದೆ ಒಂದು ಗಾಣ, ಮನೆಯನ್ನು ನೀಡಿದಂತೆ ತಿಳಿಯುತ್ತದೆ.[14] ನಾಲ್ಕನೆಯ ಸೋಮೇಶ್ವರನ ಮಡದಿಯಾದ ಮೈಳಲದೇವಿಯ ಬಾಗೇವಾಡಿಯ ಸೋಮೇಶ್ವರ ದೇವಾಲಯದ ಜೀರ್ಣೋದ್ಧಾರ ಮಾಡಿಸಲು ಭಲ್ಲರಸ ಮತ್ತು ಇತರರ ಸಮ್ಮುಖದಲ್ಲಿ ಹೊನ್ನವಾಡ ಗ್ರಾಮದ ಭೂಮಿಯನ್ನು ದಾನವಾಗಿ ನೀಡಿರುವುದನ್ನು ಕ್ರಿ.ಶ. 1165ರ ಶಾಸನವೊಂದರಿಂದ ತಿಳಿದು ಬರುತ್ತದೆ.[15]

ಕ್ರಿ.ಶ. 1019ರ ಕಳಿಹಾಳದ ಶಾಸನವೊಂದು ಜಗದೇಕಮಲ್ಲ ಜಯಸಿಂಹನ ಮಹಾ ಮಂಡಳೇಶ್ವರ ಕುಂದರಾಜನ ಸತಿ ಜೋಗಲದೇವಿಯ ದಾನ ಪ್ರವೃತ್ತಿಯನ್ನು ಇಂತು ಹೇಳಿದೆ.

ನೆಟ್ಟನೆ ರೂಪವಿಭ್ರಮಕೆ ದಾನದ ಧರ್ಮದ ರೂಢಿಗುಂತೆ ಬಾ
ಯಿಟ್ಟು ನಿರಂತರಂ ಪಡೆವ ಕಾಂಡೆಯರಾ ವಧು ಕೊಟ್ಟ ದಾಸಮಂ
ಕೊಟ್ಟರೂ ಪುಟ್ಟುವಂದೊಡನೆ ಪುಟ್ಟಿದರೋ ಸತಿ ತೊಟ್ಟಿಲೊಳ್
ಪುಟ್ಟಮನೋಂತರೋ ನೆಗಳ್ದ ಜೋಗಲದೇವಿಯ ನೋಂತ ನೋಡಿವ

ಎಂದು ಹೇಳಿದೆ. ಈ ಜೋಗಲದೇವಿ ಅಜ್ಜಡಿಯನ್ನಾಳುತ್ತಿರಲು ಅಲ್ಲಿಯ ಗಾವುಂಡನಾದ ರಾಚಮಲ್ಲನ ಭಿನ್ನಪರ ಮೇರೆಗೆ ಅಜ್ಜಡಿಯ ಸಹದೇವೇಶ್ವರಕ್ಕೆ ಕರಿಯಕ್ಕೆಯ್ ರಾಜಮಾನದಲ್ಲಿ ಆರು ಮತ್ತರು ಭೂಮಿಯನ್ನು ಜೀರ್ಣೋದ್ಧಾರಕ್ಕೆ ಬಿಟ್ಟು ಅದಕ್ಕೆ ನಾಲ್ಕು ಜನ ಸೂಳೆಯರನ್ನು ನೇಮಿಸಿ ಅವರು ಎಲ್ಲಿಗೂ ಹೋಗದಂತೆ ನಿರ್ಬಂಧ ಹಾಕಿರುವಳು.[16]

**7.5 ದೇವರ ನೈವೇದ್ಯಕ್ಕೆ/ಪೂಜಾರಿಗಳು/ಇತರ ಸೇವಾ ವರ್ಗದವರಿಗೆ ನೀಡಿದ ದಾನಗಳು**

ಆರನೆಯ ವಿಕ್ರಮಾದಿತ್ಯನ ರಾಣಿ ಕೇತಲದೇವಿಯು ಕುಂಬಿಟ್ಟಿಗೆಯ ಚಂಡೇಶ್ವರದೇವರು, ಅಲ್ಲಿದ್ದ ವಿನಾಯಕ ದೇವರ ಪೂಜಿಸುವ ಮಾಣಿ, ಆದಿತ್ಯ ದೇವರ ಪೂಜಿಸುವ ಮಾಣಿ, ಮಠದ ತಪೋಧನ ಅಭ್ಯಾಗತರ ಸತ್ರಕ್ಕೆ 14 ಮತ್ತರ ಭೂಮಿಯನ್ನು ದಾನವಾಗಿ ನೀಡಿರುವುದನ್ನು ಕ್ರಿ.ಶ. 1077 ರ ಶಾಸನವೊಂದರಿಂದ ತಿಳಿಯುತ್ತದೆ.[17] ಅವನ ಇನ್ನೊಬ್ಬ ರಾಣಿ ಪಿರಿಯ ಕೇತಲದೇವಿಯು ಸಿರುಗುಪ್ಪೆಯ ಸ್ವಯಂ ಭೂ ಕೇತಲೇಶ್ವರ ದೇವರ ಅಂಗಭೋಗ, ಪಾತ್ರ, ಪಾಡುವವರಿಗೆ ದತ್ತಿ ಬಿಟ್ಟಿರುವುದನ್ನು ಕ್ರಿ.ಶ. 1091 ರ ಶಾಸನವು ಹೇಳಿದೆ.[18] ಮೈಳಲಮಹಾದೇವಿಯು ದೇವಕಾಯಾನ ನಿಮಿತ್ಯ 100 ಮತ್ತರು ಭೂಮಿ, ಎರಡು ತೋಟ, ಎರಡು ಗಾಣಗಳನ್ನು ಬಿಟ್ಟಿರುವಳು[19] ಹೀಗೆ ಆರನೆಯ ವಿಕ್ರಮಾದಿತ್ಯನ ಅನೇಕ ರಾಣಿಯರು ಶೈವ ಧರ್ಮದ ಅಭಿವೃದ್ಧಿಗೆ ಸೇವೆಯನ್ನು ಸಲ್ಲಿಸಿರುವರು.

ಕ್ರಿ.ಶ. 1087ರ ಶಾಸನವೊಂದು ಮಹಾಮಂಡಲೇಶ್ವರ ಜಗದೇಕಮಲ್ಲ ಮಲ್ಲಿದೇವ ಚೋಳ ಮಹಾರಾಜನ ಪಿರಿಯರಸಿ ಬಲ್ಲಿದೇವಿ ಸಿರಿವೊಲಕೆರೆಯನ್ನಾಳುತ್ತಿರಲು ಅಲ್ಲಿಯ ಕಲಿದೇವಸ್ವಾಮಿ ಸ್ನಾನ ನೈವೇದ್ಯಕ್ಕೋಸುಗ ತೇಜೋರಾಸಿ ಪಂಡಿತರ ಪಾದ ತೊಳೆದು ಮತ್ತರು ಭೂಮಿಯನ್ನು ದಾನವಾಗಿ ಬಿಟ್ಟಿರುವಳು.[20]

ತ್ರೈಲೋಕ್ಯಮಲ್ಲನ ರಾಣಿ ತ್ರೈಳೋಕ್ಯಮಹಾದೇವಿಯು ಕಲ್ಯಾಣದಿಂದ ರಾಜ್ಯಭಾರವನ್ನು ಮಾಡುತ್ತಿದ್ದ ಸಮಯದಲ್ಲಿ ನಿಟ್ಟರವೆ ಎಪ್ಪತ್ತರ ಬಳಿಯ ಅಗ್ರಹಾರ ಮುಕ್ಕುಂದೆಯನ್ನು ತ್ರಿಭೋಗ್ಯಾಭ್ಯಂತರವಾಗಿ ಈಕೆ ಆಳುತ್ತಿದ್ದು ತುಂಗಭದ್ರಾನದಿಯ ತೀರದ ಕಪಾಳೇಶ್ವರ ದೇವರಿಗೆ 12 ಮತ್ತರು ಕರಿಯ ಭೂಮಿಯನ್ನು ಸೆಟ್ಟಿಕಬ್ಬೆಯ ಗಡಿಂಬದ ಕೋಲಿನಿಂದ ಅಳೆದು ದಾನ ನೀಡುತ್ತಾಳೆ. ಇದರೊಂದಿಗೆ ಒಂದು ತೋಟ ಮತ್ತು ನಂದಾದೀಪಕ್ಕಾಗಿ ಒಂದು ಗಣವನ್ನು ದಾನ

ಬಿಡುತ್ತಾಳೆ.[21] ಎರಡನೆಯ ಜಯಸಿಂಹನ ರಾಣಿ ಸೋಮಲದೇವಿಯು ಪೊಟ್ಟಕಲಕೆರೆಯ ನೆಲೆ ಬೀದಿಯಲ್ಲಿದ್ದಾಗ ಜಯ ಚಂಡರಲೆಮಾರಬೆಯ ಕೋರಿಕೆಯ ಮೇರೆಗೆ ಎಡೆದೊರೆ 2000 ದಲ್ಲಿಯ ಮೊಸಳಿಕಲ್ಲು 300 ಭತ್ತಾಗ್ರಾಮ ಬಳ್ಳನಿಟ್ಟಗೆಯ ಬಂಕೇಶ್ವರ ದೇವರಿಗೆ ನಿವೇಶನ, ಗಾಣ, ತೋಟ ಮುಂತಾದವುಗಳನ್ನು ಗೋಕರ್ಣರಾಗಿ ಜೀಯರಿಗೆ ಬಿಟ್ಟುಕೊಟ್ಟದನ್ನು ಕ್ರಿ.ಶ. 1036ರ ನುಗಡೋಣೆಯ ಶಾಸನವು ಹೇಳಿದೆ.[22] ಇವಳು ಯಾದಗಿರಿ ನೆಲೆವೀಡಿನಲ್ಲಿದ್ದಾಗ ದಿಗ್ಗಿಗೆಯ ಮಧುಸೂಧನ ಭಟ್ಟರಿಗೆ ಭತ್ತಗ್ರಾಮ ಒಳನಿಟ್ಟಗೆಯಲ್ಲಿ ಪಿರಿಯಕೋಲಲ್ಲಿ ಮೂರುಮತ್ತರ ಭೂಮಿಯನ್ನು ದಾನವಾಗಿ ಬಿಡುತ್ತಾಳೆ. ಇವರೊಂದಿಗೆ 10 ಕೈಯ್ಯ ಅಳತೆಯ ಮನೆಯ ನಿವೇಶನವನ್ನು ನೀಡುತ್ತಾಳೆ.[23] ಆರನೆಯ ವಿಕ್ರಮಾದಿತ್ಯನ ರಾಣಿ ಲಕ್ಷ್ಮಾದೇವಿಯ ತಂದೆ ಕಂಕೋಜ ತಾಯಿ ಮಸಣಿಕವೆ ನಾಯಕಿತಿಯರು ಖೇಡಗೆಯ ಕಂಕೇಶ್ವರ ಪೂಜೆ ಪುನಸ್ಕಾರಕ್ಕೆ ಭೂಮಿ, ನಿವೇಶನ ಪೂದೋಟ ಗಳನ್ನು ನೀಡಿರುವುದನ್ನು ಶಾಸನವೊಂದು ಹೇಳಿದೆ.[24] ಹೀಗೆ ಚಾಲುಕ್ಯ ರಾಣಿಯರು ಸಾಮಂತರ ಶೈವ ಧರ್ಮಕ್ಕೆ ವಿಶೇಷವಾದ ಪೋಷಣೆಯನ್ನು ನೀಡಿರುವುದು ಶಾಸನಗಳಿಂದ ತಿಳಿದು ಬರುತ್ತದೆ.

# ಅಡಿಟಿಪ್ಪಣಿಗಳು

1) VYAS. SN. INDIA IN THE RAMAHYANA AGE P.3
2) EC VII SK 125 ಕ್ರಿ.ಶ. 1019
3) I.A. XVIII 270 ಕ್ರಿ.ಶ. 1022
4) SII XI (ii) 126 ಕ್ರಿ.ಶ. 1080
5) EI XV, 6 ಕ್ರಿ.ಶ. 1084
6) ತಾಳ್ತಜೆ ವಸಂತಕುಮಾರ, ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಪುಟ 40
7) ಕುಂದಣಗಾರ ಕೆ.ಜಿ. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ 19 ಸಂಚಿಕೆ 3 ಪುಟ 230–33
8) Saletore B.A. Mediaeval Jainism P-2
9) ನರಸಿಂಹಾಚಾರ ಆರ್. ಶಾಸನ ಪದ್ಯ ಮಂಜರಿ 250
10) ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ
11) BKI (II) 83 ಕ್ರಿ.ಶ. 1049
12) SII XVIII 67 ಕ್ರಿ.ಶ. 1062
13) ರಾಯಚೂರು ಜಿಲ್ಲೆಯ ಶಾಸನಗಳು ಪುಟ 278 ಕ್ರಿ.ಶ. 1076
14) SII XV 104 ಕ್ರಿ.ಶ. 1165
15) SII XVIII, 44 ಕ್ರಿ.ಶ. 1019
16) SII XX (i) 51 ಕ್ರಿ.ಶ. 1077
17) SII IX (i) 159 ಕ್ರಿ.ಶ. 1091
18) SII XX 61, ಕ್ರಿ.ಶ. 1085
19) EC XI Ch ಕ್ರಿ.ಶ. 1087
20) ರಾಯಚೂರು ಜಿಲ್ಲೆಯ ಶಾಸನಗಳು ಪುಟ 376 ಕ್ರಿ.ಶ. 1066
21) ಅದೇ ಪುಟ 316 ಕ್ರಿ.ಶ. 1036
22) ಅದೇ ಪುಟ 308 ಕ್ರಿ.ಶ. 1031
23) SII XX 94 ಕ್ರಿ.ಶ. 11–12 ಶತಮಾನ

# ಅಧ್ಯಾಯ 8
# ಉಪಸಂಹಾರ

ಕಲ್ಯಾಣದ ಚಾಳುಕ್ಯರ ಮಹಿಳೆಯರ ಸ್ಥಾನಮಾನ ಎಂಬ ಶೀರ್ಷಿಕೆಯನ್ನು ಹೊತ್ತ ಈ ಮಹಾಪ್ರಬಂಧವು ಕ್ರಿ.ಶ. 973 ರಿಂದ 1200 ರವರೆಗಿನ ಅಂದರೆ ಕಲ್ಯಾಣದ ಚಾಳುಕ್ಯರ ಮನೆತನದ ಸ್ಥಾಪನೆಯಿಂದ ಪ್ರಾರಂಭವಾಗಿ ಅವರ ಅವನತಿಯವರೆಗಿನ ಕಾಲಾವಧಿಯನ್ನು ಒಳಗೊಂಡಿದೆ. ಈ ಅವಧಿಯಲ್ಲಿ ಲಭ್ಯವಿರುವ ಚಾಳುಕ್ಯರ ಹಾಗೂ ಅವರ ಸಾಮಂತರಸರ ಶಾಸನಗಳನ್ನು ಅವಲೋಕಿಸಿದ್ದಲ್ಲದೆ ಸಂದರ್ಭಕ್ಕನುಸಾರವಾಗಿ ಸಮಕಾಲೀನ ಸಾಹಿತ್ಯ ಕೃತಿಗಳನ್ನು ಕೊಂಡು ಈ ಮಹಾಪ್ರಬಂಧವನ್ನು ರಚಿಸಲಾಗಿದೆ. ಕಲ್ಯಾಣದ ಚಾಲುಕ್ಯರ ಕಾಲದ ಇತಿಹಾಸದುದ್ದಕ್ಕೂ ಬೆರೆತು ನಿಂತ ಮಹಿಳಾ ವರ್ಗವನ್ನು ಅವರ ರಾಜಕೀಯ, ಆಡಳಿತಾತ್ಮಕ, ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಚಟುವಟಿಕೆಗಳನ್ನು ಅವಲೋಕಿಸಲಾಗಿದೆ. ಅಲ್ಲದೆ ಅವರು ಕರ್ನಾಟಕ ಸಂಸ್ಕೃತಿಯ ಬೆಳವಣಿಗೆಗೆ ನೀಡಿದ ಕೊಡುಗೆಗಳನ್ನು ಪರಿಶೀಲಿಸಲಾಗಿದೆ.

ಪ್ರಾಚೀನ ಭಾರತೀಯ ಮಹಿಳೆಯ ಬಹುಮುಖ್ಯ ಮತ್ತು ಗೌರವ ಪೂರ್ಣವಾದ ಸ್ಥಾನವನ್ನು ಹೊಂದಿದ್ದಳು. ಮುಂದೆ ಹಲವಾರು ಏರಿಳಿತಗಳನ್ನು ಕಂಡು ಚಾಲುಕ್ಯರ ಕಾಲದಲ್ಲಿ ಒಳೆಯ ಸ್ಥಾನಮಾನ ಹೊಂದಿರುವುದನ್ನು ಅಧ್ಯಯನದುದ್ದಕ್ಕೂ ಹೇಳಲಾಗಿದೆ. ಮಹಿಳೆಯು ಆಡಳಿತ ಗಾರಳಾಗಿ, ಗೌರ್ನರಳಾಗಿ, ಗೌವುಂಡಳಾಗಿ ಹೀಗೆ ಹಲವಾರು ಆಡಳಿತಾತ್ಮಕ ಹುದ್ದೆಯಲ್ಲಿ ಪುರುಷರಿಗೆ ಸಮಾನರಾಗಿ ಕಾರ್ಯ ನಿರ್ವಹಿಸಿರುವುದನ್ನು ಚಾಳುಕ್ಯರ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಸಮರ್ಥಿಸಲಾಗಿದೆ. ರಾಜನ ಜೊತೆಯಲ್ಲಿ ಅಲ್ಲದೆ ಸ್ವತಂತ್ರವಾಗಿ ಆಡಳಿತವನ್ನು ನಿರ್ವಹಿಸುತ್ತಿರುವುದನ್ನು ಸಹಿತ ಗುರುತಿಸಲಾಗಿದೆ.

ಅಂದಿನ ಸಮಾಜದಲ್ಲಿ ಗಂಡು ಮಗನಷ್ಟು ಪ್ರಾಮುಖ್ಯತೆಯನ್ನು ಗಳಿಸದಿದ್ದರೂ ಸಹ ಶಾಸನಗಳು ಅವಳನ್ನು ಸುಪುತ್ರಿ ಕುಲದೀಪಿಕೆ ಎಂದು ಕರೆದಿರುವುದನ್ನು ಕಾಣುತ್ತೇವೆ.

ಚಾಳುಕ್ಯ ಕಾಲದ ಮಹಿಳೆಯರು ಹಿಂದಿನಿಂದ ಬಂದ ಪರಂಪರೆಯನ್ನು ಮುಂದುವರೆಸಿ ಕೊಂಡು ಬಂದರು. ಸಾರ್ವಜನಿಕ ಉಪಯೋಗವಾಗುವ ಹಲವಾರು ಕಾರ್ಯಗಳನ್ನು ಮಹಿಳೆಯರು ಕೈಗೊಂಡಿರುವುದನ್ನು ಉದಾಹರಣೆಯೊಂದಿಗೆ ಚರ್ಚಿಸಲಾಗಿದೆ. ಅದೇ ರೀತಿ ಮಹಿಳೆಯರು

ಧಾರ್ಮಿಕ ಕ್ಷೇತ್ರದಲ್ಲಿ ಭಾಗವಹಿಸುತ್ತಿರುವುದಲ್ಲದೆ, ದೇವಾಲಯಗಳ ನಿರ್ಮಾಣ, ಮೂರ್ತಿಗಳ ಪ್ರತಿಷ್ಠಾಪನೆ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿರುವುದನ್ನು ಹೇಳಲಾಗಿದೆ. ಇದರಿಂದ ಮಹಿಳೆಯರಿಗೆ ಸಮಾಜದಲ್ಲಿ ಉನ್ನತವಾದ ಗೌರವವಿರುವುದು ಗೊತ್ತಾಗುತ್ತದೆ. ಅಲ್ಲದೆ ಮಹಿಳೆಯರು ಹೆಸರು ಗಳಿಸಿದುದಲ್ಲದೇ ಕೀರ್ತಿವಂತರಾಗಿರುವುದು ಸ್ಪಷ್ಟವಾಗುತ್ತದೆ. ಚಾಲುಕ್ಯ ಸಾಮಂತರಾಗಿದ್ದ ನಂತರ ರಾಣಿ ಚಟ್ಟಲದೇವಿಯು ದಾನಚಿಂತಾಮಣಿ ಅತ್ತಿಮಬ್ಬೆಯ ಆದರ್ಶವನ್ನು ಪಾಲಿಸಿದಳು. ಸತಿಯಾಗಲಿಲ್ಲ, ಸನ್ಯಾಸಿನಿ ಆಗಲಿಲ್ಲ, ಸಂಸಾರದಲ್ಲಿ ಇದ್ದುಕೊಂಡೇ ಕೌಟುಂಬಿಕ ಕೆಲಸಗಳ ಮೂಲಕ ಗೃಹ ತಪಸ್ವಿಯೆನಿಸಿದಳು, ಅತ್ತಿಮಬ್ಬೆಯಂತೆ ಮಹಾಸತಿ ಎಂದೆನಿಸಿದಳು.

ಅತ್ತಿಮಬ್ಬೆ ಮಾಡಿದ ಲೋಕೋಪಕಾರಿ ಕೆಲಸಗಳು ಹಲವಾರು, ಕೆರೆ ಕಟ್ಟಿಸಿದಳು, ಬಾವಿ ತೊಡಗಿಸಿದಳು, ಬಸದಿ ದೇಗುಲಗಳನ್ನು ಮಾಡಿಸಿದಳು, ಅರವಟಿಗೆಗಳನ್ನು ಹಾಕಿಸಿದಳು, ಜಲಾಶಯಗಳನ್ನು ನಿರ್ಮಿಸಿದಳು, ದಾನಶಾಲೆಗಳನ್ನು (ಧರ್ಮಸತ್ರ) ನೆರಳಿನ ಆಸರೆಗಳನ್ನು ರಚಿಸಿ ಕೊಟ್ಟಳು. ಹೀಗೆ ಮಹಿಳೆಯರು ಗೃಹಿಣಿಯಾಗಿರುವುದಲ್ಲದೆ ಲೋಕೋಪಕಾರಿ ಕೆಲಸಗಳನ್ನು ಮಾಡಿಸಿದ್ದಾರೆ ಎಂಬುವುದನ್ನು ಶಾಸನಗಳಿಂದ ಸಮರ್ಥಿಸಲಾಗಿದೆ.

ಶಿಕ್ಷಣ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿಯೂ ಮಹಿಳೆಯರು ಮಿನುಗಿರುವುದು ಚಾಳುಕ್ಯರ ಶಾಸನದ ಹಾಗೂ ಸಾಹಿತ್ಯ ಕೃತಿಗಳಿಂದ ತಿಳಿಯುತ್ತದೆ. ಮಹಿಳೆಯರಿಗೆ ಶಿಕ್ಷಣವು ಅಷ್ಟಾಗಿ ದೊರೆಯದಿದ್ದರೂ ಉನ್ನತ ವರ್ಗದ ಮಹಿಳೆಯರಿಗೆ ಅಕ್ಷರಾಭ್ಯಾಸಗಿಂತಲೂ ಲಲಿತ ಕಲೆಗಳ ಶಿಕ್ಷಣವನ್ನು ಕೊಡುತ್ತಿದ್ದಿತು. ಅದರಲ್ಲೂ ನೃತ್ಯ, ಸಂಗೀತ ಅಭಿಜ್ಞೆಯರಾಗಿದ್ದರೆಂದು ಅವರು ಹೊಂದಿರುವ ವಿಶೇಷಣಗಳಿಂದ ತಿಳಿದು ಬರುತ್ತದೆ. ಚಾಲುಕ್ಯ ಜಗದೇಕಮಲ್ಲದೇವನ ಮಡದಿ ಸುಗ್ಗಲದೇವಿ ಕಲಿಕಾಲ ಸರಸ್ವತಿ ಆಗಿದ್ದರೆ ತ್ರೈಲೋಕ್ಯಾಮಲ್ಲ ಸೋಮೇಶ್ವರನ ಮಡದಿ ಮೈಲಳದೇವಿ ವಿಳಾಸ ವಿದ್ಯಾಧರಿ ಎಂದು ಕರೆದರೆ ಭುವನೈಕಮಲ್ಲನ ಮಡದಿ ಕಂಚಲ ಮಹಾದೇವಿಯನ್ನು ಶ್ರೀಂಗಾರ ವಿದ್ಯಾಧರಿ ಸಕಳಕಳಾಧರಿ ಎಂಬ ವಿಶೇಷಣಗಳು ಶಾಸನದಲ್ಲಿ ಕಂಡು ಬರುತ್ತದೆ. ಅಹವಮಲ್ಲದೇವನ ಮಡದಿ ಸುಗ್ಗಲದೇವಿಯನ್ನು ಅಭಿನವ ಸರಸ್ವತಿ ಎಂದು ಶಾಸನವೊಂದು ಕರೆದಿದೆ.

ಆರನೇಯ ವಿಕ್ರಮಾದಿತ್ಯನ ರಾಣಿ ಪಟ್ಟಮಹಾದೇವಿ ಮೈಳಲದೇವಿ ಕರಿಕಾಲ ಸರಸ್ವತಿ ಸಾಹಸ ವಿದ್ಯಾಧರಿ ಸಕಳ ಕಳಾವತಿ ಎಂದು ಕರೆದರೆ ಇನ್ನೊಬ್ಬ ರಾಣಿ ಚಾಕಲದೇವಿ ಅಭಿನಯ

ಸರಸ್ವತಿ ಸಕಳ ವಿದ್ಯಾಧರಿ ಎಂದು ಹೇಳಿದೆ. ಅವನ ಮತ್ತೊಬ್ಬ ರಾಣಿ ಚಂದಲದೇವಿಯನ್ನು ನೃತ್ಯ ವಿದ್ಯಾಧರಿ ಕರಿಕಾಲಸರಸ್ವತಿ ಎಂದು ಕರೆದಿದೆ. ಹೀಗೆ ಅಂದಿನ ಉನ್ನತ ವರ್ಗದ ಮಹಿಳೆ ಲಲಿತ ಕಲೆಗಳಲ್ಲಿ ಶಿಕ್ಷಣ ಪಡೆದಿರುವುದು ಸ್ಪಷ್ಟಗೊಳಿಸಲಾಗಿದೆ. ಅದರಂತೆ ಮಹಿಳೆಯರು ಶಿಕ್ಷಣ ಕೇಂದ್ರಗಳಾದ ಅಗ್ರಹಾರಗಳನ್ನು ಬ್ರಹ್ಮಪುರಿಗಳ ಬ್ರಾಹ್ಮಣರಿಗೆ ದಾನ ಕೊಡುವುದರೊಂದಿಗೆ ಅವುಗಳ ಆಡಳಿತವನ್ನು ನೋಡಿಕೊಂಡಿರುವುದನ್ನು ಉದಾಹರಣೆಗಳೊಂದಿಗೆ ವಿವರಿಸಲಾಗಿದೆ.

ಮಹಿಳೆಯರು ಸಾಹಿತ್ಯ ಕ್ಷೇತ್ರಕ್ಕೂ ತಮ್ಮದೇ ಆದ ಕೊಡುಗೆಗಳನ್ನು ನೀಡಿರುವುದನ್ನು ವಿವರಿಸಲಾಗಿದೆ. ಅವರಲ್ಲಿ ಜೈನಕವಿಯಿತ್ರಿ ಕಂತಿ, ಹಾಗೂ ವಚನ ಸಾಹಿತ್ಯದಲ್ಲಿ ಉಲ್ಲೇಖಿತ ರಾಗಿರುವ ಅಕ್ಕಮಹಾದೇವಿ, ಅಕ್ಕನಾಗಮ್ಮ, ಅಕ್ಕಮ್ಮ, ಅಮುಗೆ ರಾಯಮ್ಮ, ಆಯ್ದಕ್ಕಿ ಲಕ್ಕಮ್ಮ, ಉರಿಲಿಂಗ ಪೆದ್ದಿಗಳ ಪುಣ್ಯ ಸ್ತ್ರೀಕಾಳವೆ, ಕದರಿ, ಕಾಯಕದ ಕಾಳವ್ವೆ, ಸಿದ್ದಿ ಬುದ್ದಯ್ಯಗಳ ಪುಣ್ಯಸ್ತ್ರೀ ಕಾಳವ್ವೆ, ಬಾಚಿ ಕಾಯಕದ ಬಸವಯ್ಯಗಳ ಪುಣ್ಯ ಸ್ತ್ರೀ ಕಾಳವ್ವೆ, ಕನ್ನಡಿ ಕಾಯಕದ ರೇವಮ್ಮ, ಕೊಂಡೆಮಂಚಣ್ಣಗಳ ಪುಣ್ಯಸ್ತ್ರೀ ಲಕ್ಷ್ಮಮ್ಮ, ಕೊಟ್ಟಣದ ಸೋಮವ್ವೆ, ಗಂಗಾಭಿಕೆ, ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿ, ಗೊಗ್ಗವ್ವೆ, ದಾಸರಯ್ಯಗಳ ಪುಣ್ಯಸ್ತ್ರೀ ವೀರಮ್ಮ, ನೀಲಲೋಚನೆ, ಬೊಂತಾದೇವಿ, ಮುಕ್ತಾಯಕ್ಕ, ಮೋಳಿಗೆಯ ಮಹಾದೇವಿಯಮ್ಮ, ರೇವಣ್ಣ ಸಿದ್ದಯ್ಯಗಳ ಪುಣ್ಯಸ್ತ್ರೀ ರೇಕಮ್ಮ, ಸತ್ಯಕ್ಕ, ಸೂಳೆ ಸಂಕವ್ವೆ, ಹಡಪದ ಲಿಂಗಮ್ಮ ಹೀಗೆ ವಚನ ಸಾಹಿತ್ಯದಲ್ಲಿ ಅನೇಕ ಜನ ಮಹಿಳೆಯರು ವಚನಗಳನ್ನು ರಚಿಸುವುದರ ಮೂಲಕ ವಚನ ಸಾಹಿತ್ಯವನ್ನು ಹುಲುಸಾಗಿ ಬೆಳೆಸಿರುವುದನ್ನು ಕಾಣುತ್ತೇವೆ. ಅಕ್ಕಮಹಾದೇವಿಯ ಹೆಸರು ಸಾಹಿತ್ಯ ದಲ್ಲಿಯೇ ಅಮೋಘವಾದುದು. ಅವಳು ಒಂದು ಧರ್ಮದ ಅಥವಾ ಒಂದು ಮತದ ವ್ಯಕ್ತಿಯಲ್ಲಾ, ಎಲ್ಲಾ ಕಾಲದ, ಎಲ್ಲಾ ಧರ್ಮದ, ಎಲ್ಲಾ ದೇಶದ ಜನರು ಅನುಸರಿಸಬಹುದಾದ ಅನೇಕ ಸದ್ಗುಣಗಳ ಖಣಿ ಅದಕ್ಕಾಗಿಯೇ ಆಕೆಯನ್ನು ಎಲ್ಲರೂ ಎಲ್ಲಾ ಕಾಲಕ್ಕೂ ಅಕ್ಕ ಎಂಬುವುದನ್ನು ಸಮರ್ಥಿಸುವುದಲ್ಲದೇ ಅವಳ ವಚನಗಳ ಶ್ರೇಷ್ಟತೆಯನ್ನು ಪ್ರತಿಪಾದಿಸಲಾಗಿದೆ. ಇನ್ನುಳಿದ ವಚನಕಾರ್ತಿಯರ ವಚನಗಳಲ್ಲಿ ಅಭಿವ್ಯಕ್ತವಾದ ಸಾಮಾಜಿಕ ಚಿಂತನೆಯನ್ನು ಸಂದರ್ಭಾನುಸರವಾಗಿ ಹೇಳಲಾಗಿದೆ.

ಮಹಿಳೆಯರಿಗೆ ಮುಕ್ತವಾಗಿ ಕಾರ್ಯ ನಿರ್ವಹಿಸಲು ಸಹಾಯಕವಾದ ಕ್ಷೇತ್ರವೆಂದರೆ ಧಾರ್ಮಿಕ ಕ್ಷೇತ್ರ. ಪ್ರಾರಂಭದ ಹಂತದಲ್ಲಿ ಯಾವುದೇ ಧಾರ್ಮಿಕ ಕಾರ್ಯದಲ್ಲಿಯೂ ಸತಿಪತಿಗಳು ಒಂದಾಗಿಯೇ ಯಜ್ಞ ಯಾಗಾದಿ, ದಾನ ಧರ್ಮಾಧಿ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಇದು

ಒಂದು ರೀತಿಯ ಅವಿಭಕ್ತ ಕುಟುಂಬ ಪದ್ಧತಿಯನ್ನು ಸೂಚಿಸುವುದರೊಂದಿಗೆ ಕುಟುಂಬದಲ್ಲಿ ಒಕ್ಕಟ್ಟನ್ನೂ ಪ್ರತಿನಿಧಿಸುವಂತಹದ್ದಾಗಿದೆ.

ಹೆಚ್ಚಿನ ಪ್ರಮಾಣದಲ್ಲಿ ಧರ್ಮ ಸ್ವಾತಂತ್ರ್ಯ ಪಡೆದವರು ಜೈನ ಮಹಿಳೆಯರು. ಇದರಲ್ಲಿ ಕಂತಿಯರು ಕಠೋರ ತತ್ವಗಳ ಮೂಲಕ, ಶ್ರಾವಕೀಯರು ಸರಳತತ್ವಗಳ ಮುಖಾಂತರ ಧರ್ಮ ಪರಿಪಾಲನೆಗೈದರು. ಬಸದಿ ನಿರ್ಮಾಣ, ಬಸದಿಗೆ ದಾನ, ವಿಗ್ರಹ ಪ್ರತಿಷ್ಠಾಪನೆ, ಚತುರ್ವಿಧ ದಾನ ಕ್ಷೇತ್ರಗಳಲ್ಲಿ ಪುರುಷರಿಗೆ ಸಮೀಪ ಕೆಲಸ ಮಾಡಿದವರು ಅತ್ತಿಮಬ್ಬೆಯಂಥವರನ್ನು ಸಾಹಿತ್ಯ ಕ್ಷೇತ್ರದಲ್ಲಿ ಕಂತಿಯಂಥವರನ್ನು ಉದಾಹರಿಸಬಹುದು. ಇವರು ಧರ್ಮದ ಬೆಳವಣಿಗೆಯ ಜೊತೆಗೆ ಕವಿಗಳಿಗೆ ಆಶ್ರಯ ತೊಟ್ಟು ಗ್ರಂಥದಾನ ನೆರವೇರಿಸಿ ಸಾಹಿತ್ಯ ಕ್ಷೇತ್ರಕ್ಕೆ ಸೇವೆಯನ್ನು ಸಲ್ಲಿಸಿದರು.

ಅದರಂತೆ ವೈದಿಕ ಮತಗಳ ಅಭಿವೃದ್ಧಿಗಾಗಿಯೇ ಇವರು ಶ್ರಮ ವಹಿಸಿರುವುದನ್ನು ಹಿಂದಿನ ಅಧ್ಯಾಯಗಳಲ್ಲಿ ಪ್ರಸ್ತಾಪಿಸಲಾಗಿದೆ. ಶೈವ ಆಚಾರ್ಯಣಿಯಾಗಿದ್ದ ಅಬ್ಬೆ, ಗೊರವಿ, ಗಣ ಕುಮಾರಿಯರು ಶೈವ ಆಚಾರ್ಯರ ಸಾಲಿನಲ್ಲಿ ನಿಂತು ಧರ್ಮ ಕಾರ್ಯಗಳ ನಡೆಸಿರುವರು.

ಮಹಿಳೆಯ ಸಹಗಮನದ ಮತ್ತು ಸಲ್ಲೇಖನದಲ್ಲಿ ಭಾಗವಹಿಸಿ ತಮ್ಮ ತೇಜಸ್ಸನ್ನು ಮೆರೆದಿದ್ದಾನೆ. ಜೈನ ಕಂತಿ, ಗಂತಿಯರು ಸಮಾಧಿ ಮರಣದಲ್ಲಿ ಭಾಗಿಗಳಾಗಿದ್ದಾರೆ. ಹಿಂದೂ ಮಹಿಳೆಯರು ಸಹಗಮನದಲ್ಲಿ ಭಾಗಿಗಳಾಗಿದ್ದಾರೆ. ಹೀಗೆ ತಮ್ಮತನವನ್ನು ಮೆರೆದಿರುವುದನ್ನು ಕಾಣುತ್ತೇವೆ.

ಒಟ್ಟಿನಲ್ಲಿ ಕ್ರಿ.ಶ. 973 ರಿಂದ 1200 ರವರೆಗಿನ ಅವಧಿಯಲ್ಲಿ ಕಲ್ಯಾಣದ ಚಾಳುಕ್ಯರ ಕಾಲದ ಮತ್ತು ಅವರ ಸಮಕಾಲೀನ, ಸಾಮಂತರ, ಶಾಸನಗಳನ್ನು ಅವಲೋಕಿಸಿ ಆ ಕಾಲದ ಮಹಿಳೆಯರ ಚಟುವಟಿಕೆಗಳ ಒಂದು ಚಿತ್ರಣವನ್ನು ನೀಡಲು ಪ್ರಯತ್ನಿಸಲಾಗಿದೆ. ಈ ಪ್ರಯತ್ನದಲ್ಲಿ ನಾವು ಯಶಸ್ವಿಯಾಗಿದ್ದರೂ ಹಲವಾರು ಕೊರತೆಗಳು ಎದ್ದು ಕಾಣುತ್ತವೆ. ಅವುಗಳಲ್ಲಿ ಶಾಸನಗಳಲ್ಲಿ ಕಂಡು ಬರುವ ತಪ್ಪುಪಾಠ, ಖಚಿತವಾದ ಶಾಸನಗಳು ಅವುಗಳಲ್ಲಿರುವ ಭಾಷಾ ಕಗ್ಗಂಟು, ದೋಷಪೂರ್ಣವಾದ ಸಂಪಾದನೆ ಅರ್ಥಯಿಸಿದಾಗಿನ ಭಿನ್ನತೆ ಇವುಗಳನ್ನು ಗಮನಿಸಿಯೂ ನಮ್ಮ ಪ್ರಯತ್ನವನ್ನು ಮಾಡಿ ಈ ಪ್ರಬಂಧವನ್ನು ರಚಿಸಿದ್ದೇವೆ.



ಒಬ್ಬ ವ್ಯಕ್ತಿ ಇಬ್ಬರು ಹೆಂಡರ ವೇಳಾವೇಳಿ
ಶಿಲ್ಪ, ಅಬ್ಬಲೂರು.



ಯುದ್ಧದಲ್ಲಿ ಮರಣ ಹೊಂದಿದ ಪತಿಯೊಂದಿಗೆ
ನಿಂತ ಮಾಸ್ತಿ (ಕಿತ್ತೂರ ಮ್ಯೂಜಿಯಂ)



ಮಾಸ್ತಿಕಲ್ಲು: ಸಸ್ತಾಪುರ ಜತೆಯಲ್ಲಿ ಮಲಗಿದ
ದಂಪತಿಗಳನ್ನು ಗಮನಿಸಬಹುದು



ಇಕ್ಕೈಮಾಸ್ತಿಕಲ್ಲು

# ಮಹಿಳೆಯರ ಕೇಶಾಲಂಕಾರಗಳು



ಕಾಶಿವಿ[illegible] ದೇವಾಲಯದಲ್ಲಿರುವ ಶಿಲ್ಪ, ಲಕ್ಕುಂಡಿ



ಕಾಶಿವಿಶ್ವೇಶ್ವರ ದೇವಾಲಯದಲ್ಲಿರುವ ಶಿಲ್ಪ, ಲಕ್ಕುಂಡಿ



ಕಾಶಿವಿ[illegible]ಶ್ವ[illegible] ದೇವಾಲಯದಲ್ಲಿರುವ ದರ್ಪಣ
[illegible]ಂದರಿ, ಲಕ್ಕುಂಡಿ



ಕಾಶಿವಿಶ್ವೇಶ್ವರ ದೇವಾಲಯ, ಲಕ್ಕುಂಡಿ

# ಕರ್ಣಾಭರಣಗಳು ಮತ್ತು ಕೊರಳೊಡವೆಗಳು



ಳೇಶ್ವರ ದೇವಾಲಯದ ಹೊರಗೋಡೆಯ
ಲೆ ಇರುವ ಶಿಲಾಬಾಲಿಕೆ. ಉಣಕಲ್



ಚಂದ್ರಮೌಳೇಶ್ವರ ದೇವಾಲಯದ ಹೊರಗೋಡೆಯ
ಮೇಲೆ ಇರುವ ಶಿಲಾಬಾಲಿಕೆ, ಉಣಕಲ್



ತಾರಾಭಗವತಿ. ಬಳ್ಳಿಗಾವೆ



ಉಮಾಮಹೇಶ್ವರಿ. ಬಳ್ಳಿಗಾವೆ

# ಕರ್ನಾಭರಣಗಳು ಮತ್ತು ಕೊರಳೊಡವೆಗಳು



[illegible]ಲ್ಲಿಕಾರ್ಜುನ ದೇವಾಲಯ, ಕುರುವತ್ತಿ



ಕಾಶಿವಿಶ್ವೇಶ್ವರ ದೇವಾಲಯ
ದ್ವಾರಶಾಖೆಯಲ್ಲಿರುವ ಶಿಲಾಭಂಜಿಕೆ



ಕಾ[illegible]ಶ್ವೇಶ್ವರ ದೇವಾಲಯ ಲಕ್ಕುಂಡಿ



ಬ್ರಹ್ಮಜಿನಾಲಯದಲ್ಲಿರು ಯಕ್ಷಿ ಲಕ್ಕುಂಡಿ

# ಮಹಿಳೆಯರ ಕೇಶಾಲಂಕಾರಗಳು



ಬ್ರಹ್ಮಜಿನಾಲಯದ ಕಂಬದಲ್ಲಿರುವ ಶಿಲ್ಪ, ಲಕ್ಕುಂಡಿ



ಕಾಶಿವಿಶ್ವೇಶ್ವರ ದೇವಾಲಯ, ಲಕ್ಕುಂಡಿ



ಮಲ್ಲಿಕಾರ್ಜುನ ದೇವಾಲಯದ ಪ್ರವೇಶದ್ವಾರದಲ್ಲಿರುವ
ಸಾಲಭಂಜಿಕೆ, ಕುರುವತ್ತಿ



ಸರಸ್ವತಿ ದೇವಾಲಯದಲ್ಲಿರುವ
ಸರಸ್ವತಿ ಶಿಲ್ಪ, ಗದಗ

# ಉಡುಪುಗಳು



ಸ್ತ್ರೀಶಿಲ್ಪವೊಂದು ನಿರಿಗೆಗಳಿಂದ ಕೂಡಿರುವ
ಸೀರೆಯನ್ನುಟ್ಟಿರುವುದನ್ನು ಕಾಣಬಹುದು. ಕಲಕೇರಿ



ಕಾಶಿವಿಶ್ವೇಶ್ವರ ದೇವಾಲಯದ
ಶಿಲ್ಪವೊಂದರ ಮೇಲೆ ಇರುವ ಸೀರೆ.ಲಕ್ಕುಂಡಿ



ಸರಸ್ವತಿ ದೇವಾಲಯದ ಸರಸ್ವತಿಯ ಶಿಲ್ಪದ ಸೀರೆಯು
ಸುಂದರವಾದ ನಕ್ಷೆಯಿಂದ ಕೂಡಿರುವುದು. ಗದಗ



ಮಲ್ಲಿಕಾರ್ಜುನ ದೇವಾಲಯದ ಗರ್ಭಗುಡಿಯ
ಮುಂಭಾಗದಲ್ಲಿರುವ ಶಿಲ್ಪ.ಕುರವತ್ತಿ

# ಗ್ರಂಥಋಣ

**ಕನ್ನಡ ಗ್ರಂಥಗಳು:**

| ಅ. ನಂ. | ಲೇಖಕರ ಹೆಸರು | ಪ್ರಕಟಣೆಯ ವರ್ಷ | ಗ್ರಂಥದ ಹೆಸರು | ಪ್ರಕಾಶಕರು | ಪ್ರಕಟಿತ ಸ್ಥಳ |
|---|---|---|---|---|---|
| 1 | ಅಣ್ಣಿಗೇರಿ ಎ.ಎಂ. | 1961 | ಶಾಸನ ಸಾಹಿತ್ಯ ಸಂಚಯ | ನಿರ್ದೇಶಕರು, ಕನ್ನಡ ಸಂಶೋಧನ ಸಂಸ್ಥೆ ಕ.ವಿ.ವಿ. | ಧಾರವಾಡ |
| 2 | ಅಣ್ಣಿಗೇರಿ ಎ.ಎಂ. | 1974 | ಐಹೊಳೆ ಸಂಸ್ಕೃತಿ ಮತ್ತು ಕಲೆ | ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾನಿಲಯ | ಧಾರವಾಡ |
| 3 | ಅಣ್ಣಿಗೇರಿ ಎ.ಎಂ | 1975 | ಕನ್ನಡ ಶಾಸನ ಸಂಗ್ರಹ | ಕನ್ನಡ ಸಾಹಿತ್ಯ ಪರಿಷತ್ತು, ಪ್ರಿಂಟಿಂಗ್ | ಬೆಂಗಳೂರು |
| 4 | ಅಣ್ಣಾರಾಯ ಮಿರ್ಜಿ | 1969 | ಜೈನಧರ್ಮ | ಆ್ಯಂಡ ಪಬ್ಲಿಷಿಂಗ್ ಹೌಸ್ | ಮೈಸೂರು |
| 5 | ಇಜಾರಿ ಧನ್ಯಕುಮಾರ | 1970 | ಆಯುರ್ವೇದ ವಿಜ್ಞಾನ | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 6 | ಈರಣ್ಣ ಕೆ.ಪಿ | 1999 | ಬಾದಾಮಿ ಚಾಲುಕ್ಯರ ಸಾಂಸ್ಕೃತಿಕ ಪರಂಪರೆ | ಮನು ಸಾಹಿತ್ಯ ಪ್ರಕಾಶನ | ಧಾರವಾಡ |
| 7 | ಉಮಾದೇವಿ ಆರ್.ಎಂ | 1973 | ಚಕ್ರವರ್ತಿ ಪೊನ್ನ ಮತ್ತು ಅವನ ಕೃತಿಗಳು | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 8 | ಉಡಚಣ ಶೈಲಜಾ | 1978 | ವಚನಕಾರರ ದೃಷ್ಟಿಯಲ್ಲಿ ಸ್ತ್ರೀ | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 9 | ಎಲಿಗಾರ ಚೆನ್ನಕ್ಕ | 1987 | ಪ್ರಾಚೀನ ಕರ್ನಾಟಕದ ರಾಣಿಯರು | ಚನ್ನಗಂಗಾ ಪ್ರಕಾಶನ | ಧಾರವಾಡ |

| | | | | | |
|---|---|---|---|---|---|
| 10 | ಎಲಿಗಾರ ಚೆನ್ನಕ್ಕ | 1990 | ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 11 | ಎಲಿಗಾರ ಚೆನ್ನಕ್ಕ | 1990 | ಬಂಕಾಪುರ ಶೋಧನೆ | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 12 | ಎಲಿಗಾರ ಚೆನ್ನಕ್ಕ | 1977 | ಮಾಸ್ತಿಕಲ್ಲುಗಳು | ಚನ್ನಗಂಗಾ ಪ್ರಕಾಶನ | ಧಾರವಾಡ |
| 13 | ಎಲಿಗಾರ ಚೆನ್ನಕ್ಕ | 1998 | ಹಾನಗಲ್ಲ ಕದಂಬರು | ಚನ್ನಗಂಗಾ ಪ್ರಕಾಶನ | ಧಾರವಾಡ |
| 14 | ಎಲಿಗಾರ ಚೆನ್ನಕ್ಕ | 1992 | ಸಾಹಿತ್ಯ ಚೈತ್ರ | ಚನ್ನಗಂಗಾ ಪ್ರಕಾಶನ | ಧಾರವಾಡ |
| 15 | ಎಲಿಗಾರ ಚೆನ್ನಕ್ಕ | 1995 | ಸಂಸ್ಕೃತಿ ಸಂಶೋಧನ | ಚನ್ನಗಂಗಾ ಪ್ರಕಾಶನ | ಧಾರವಾಡ |
| 16 | ಒಡೆಯರ ಎಸ್.ಎಸ್. (ಸಂ) | 1975 | ಕರ್ನಾಟಕ ಮತ್ತು ಜೈನ ಸಂಸ್ಕೃತಿ | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 17 | ಕಲಬುರ್ಗಿ ಎಂ.ಎ | 1973 | ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 18 | ಕಲಬುರ್ಗಿ ಎಂ.ಎ | 1974&75 | ಶಾಸನ ವ್ಯಾಸಂಗ ಭಾಗ-1 ಮತ್ತು ಭಾಗ-2 | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 19 | ಕಲಬುರ್ಗಿ ಎಂ.ಎ | 1975 | ಧಾರವಾಡ ಜಿಲ್ಲೆಯ ಶಾಸನಸೂಚಿ | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 20 | ಕಲಬುರ್ಗಿ ಎಂ.ಎ | 1998 | ವಿಜಾಪುರ ಜಿಲ್ಲೆಯ ಶಾಸನಸೂಚಿ | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 21 | ಕಲಬುರ್ಗಿ ಎಂ.ಎ | 1985 | ಮಹಾರಾಷ್ಟ್ರದ ಕನ್ನಡ ಶಾಸನಗಳು | ಕನ್ನಡ ಅಧ್ಯಯನ ವಿಭಾಗ ಮುಂಬಯಿ ವಿಶ್ವವಿದ್ಯಾಲಯ | ಮುಂಬಯಿ |
| 22 | ಕಲಬುರ್ಗಿ ಎಂ.ಎ | 1978 | ಧಾರವಾಡ ತಾಲೂಕಿನ ಶಾಸನಗಳು | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |

| | | | | | |
|---|---|---|---|---|---|
| 23 | ಕಲಬುರ್ಗಿ ಎಂ.ಎ | 1970 | ಸಮಾದಿ ಬಲಿದಾನ ವೀರಮರಣ ಸ್ಮಾರಕಗಳು | ಐ.ಬಿ.ಎಚ್.ಪ್ರಕಾಶನ | ಬೆಂಗಳೂರು |
| 24 | ಕಲಬುರ್ಗಿ ಎಂ.ಎ (ಸಂ) | 1999 | ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗ ಭಾಗ-1 | ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ | ಹಂಪಿ |
| 25 | ಕಲಬುರ್ಗಿ ಎಂ.ಎ | 1998 | ಮಾನಸೋಲ್ಲಾಸ ಸಂ-1 ಮತ್ತು ಸಂ-2 | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 26 | ಕಲಬುರ್ಗಿ ಎಂ.ಎ | 1978 | ಶಾಸನಗಳಲ್ಲಿ ಶಿವಶರಣರು | ವೀರಶೈವ ಅಧ್ಯಯನ ಸಂಸ್ಥೆ | ಡಂಬಳ, ಗದಗ |
| 27 | ಕಲಬುರ್ಗಿ ಎಂ.ಎ | 1995 | ಮಾನಸೋಲ್ಲಾಸ ಪರಿಚಯ | ಪ್ರಸಾರಾಂಗ ಕ.ವಿ.ವಿ | ಧಾರವಾಡ |
| 28 | ಕಲಬುರ್ಗಿ ಎಂ.ಎ | 1974 1975 | ಮಾರ್ಗಸಂಪುಟ 1 & 2 | ನರೇಶ ಆ್ಯಂಡ ಕಂಪನಿ | |
| 29 | ಕಲ್ಲುಡಿ ಬಸವರಾಜ | 1985 | ಮಹಾಸತಿ ಆಚರಣೆ ಒಂದು ಅಧ್ಯಯನ | ಕರ್ನಾಟಕ ವಿಶ್ವವಿದ್ಯಾಲಯ ಅಪ್ರಕಟಿತ ಪ್ರಬಂಧ | ಧಾರವಾಡ |
| 30 | ಕುಲಕರ್ಣಿ ಅನಂತ | 1980 | ಪ್ರಾಚೀನ ಭಾರತದಲ್ಲಿಯ ವಿದ್ಯಾಕೇಂದ್ರಗಳು | ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 31 | ಕುಲಕರ್ಣಿ ಬಿ.ಎನ್ (ಸಂ) | 1968 | ಸಮಯ ಪರೀಕ್ಷೆ | ಕನ್ನಡ ಸಂಶೋಧನ ಸಂಸ್ಥೆ ಕ.ವಿ.ವಿ | ಧಾರವಾಡ |
| 32 | ಕಾಮತ ಜೋತ್ಸ್ನಾ | 1988 | ಕರ್ನಾಟಕದ ಶಿಕ್ಷಣ ಪರಂಪರೆ | ಕನ್ನಡ ಅಧ್ಯಯನ ವಿಭಾಗ ಮುಂಬಯಿ ವಿಶ್ವವಿದ್ಯಾಲಯ | ಮುಂಬಯಿ |
| 33 | ಸೂರ್ಯನಾತ ಕಾಮತ | | ಕರ್ನಾಟಕ ಇತಿಹಾಸ | | |

| | | | | | |
|---|---|---|---|---|---|
| 34 | ಕೊಪ್ಪ ಎಸ್.ಕೆ | 1990 | ತರ್ದವಾಡಿ ನಾಡು ಒಂದು ಅಧ್ಯಯನ | ಪ್ರತಿಭಾ ಪ್ರಕಾಶನ | ಇಂಡಿ |
| 35 | ಕೃಷ್ಣಭಟ್ಟ ಕೆ. (ಸಂ) | 1930 | ಕೌಟಿಲ್ಯನ ಅರ್ಥಶಾಸ್ತ್ರ | ಶ್ರೀ ಕೃಷ್ಣ ಮುದ್ರಣಾಲಯ | ಉಡುಪಿ |
| 36 | ಕೃಷ್ಣಭಟ್ಟ ಕೆ. (ಸಂ) | 1935 | ಮನುಸ್ಮೃತಿ | ಶ್ರೀ ಕೃಷ್ಣ ಮುದ್ರಣಾಲಯ | ಉಡುಪಿ |
| 37 | ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ | 1970 | ಕರ್ನಾಟಕ ಇತಿಹಾಸ ದರ್ಶನ | ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ ನಿಯಮಿತ | ಬೆಂಗಳೂರು |
| 38 | ಗುರವ ಆರ್.ಎನ್ | 1974 | ತರ್ದವಾಡಿನಾಡು | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 39 | ಗುಂಡಪ್ಪ ಎಲ್ | | ಆದಿಪುರಾಣ | ಸಾಹಿತ್ಯ ಮಂದಿರ | ಮೈಸೂರು |
| 40 | ಗೋಗಿ ಹನುಮಾಕ್ಷಿ | 1956 | ಕಲಬುರ್ಗಿ ಜಿಲ್ಲೆಯ ಶಾಸನಗಳು | ಶಿವಚಂದ್ರ ಪ್ರಕಾಶನ | ಹುಬ್ಬಳ್ಳಿ |
| 41 | ಗೋಗಿ ಹನುಮಾಕ್ಷಿ | 1995 | ಸುರಪುರ ತಾಲೂಕಿನ ಶಾಸನಗಳು | ಮಹಿಳಾ ಸಾಹಿತ್ಯಕಾ ನವನಗರ | ಹುಬ್ಬಳ್ಳಿ |
| 42 | ಗೋಪಾಲ ಬಿ.ಆರ್ | 1976 | ಕನ್ನಡನಾಡಿನ ಐತಿಹಾಸಿಕ ಮಹಾಪುರುಷರು | ಕರ್ನಾಟಕ ವಿಶ್ವವಿದ್ಯಾಲಯ | ಧಾರವಾಡ |
| 43 | ಗೋಪಾಲರಾವ್ ಹೆಚ್.ಎಸ್ | 1993 | ಶಾಸನಗಳ ಹಿನ್ನಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ | ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ | ಮೈಸೂರು |

| | | | | | |
|---|---|---|---|---|---|
| 44 | ಚಂದ್ರಾಬಾಯಿ ಬಿ.ಪಿ | 1981 | ಭಾರತೀಯ ಮಹಿಳಾ ಪರಂಪರೆ | ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ | ಮೈಸೂರು |
| 45 | ಚಿಂಚೋಳಿ ಸುಭಾಸ | 1999 | ಪ್ರಾಚ್ಯಶಾಸ್ತ್ರದ ಹಿನ್ನಲೆಯಲ್ಲಿ ವಿಜಾಪುರ ಜಿಲ್ಲೆಯಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ವಾಸ್ತು ಮತ್ತು ಶಿಲ್ಪಕಲೆ | ಕರ್ನಾಟಕ ವಿಶ್ವವಿದ್ಯಾಲಯ ಅಧ್ಯಯನ ಅಪ್ರಕಟಿತ ಮಹಾಪ್ರಬಂಧ | ಧಾರವಾಡ |
| 46 | ಚಿದಾನಂದ ಮೂರ್ತಿ ಎಂ. | 1979 | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ.450 ರಿಂದ 1150) | ಮೈಸೂರು ವಿಶ್ವವಿದ್ಯಾಲಯ | ಮೈಸೂರು |
| 47 | ಚಿದಾನಂದ ಮೂರ್ತಿ ಎಂ. | 1978 | ವೀರಗಲ್ಲು ಮಾಸ್ತಿಗಲ್ಲು | ಐಬಿಎಚ್ ಪ್ರಕಾಶನ | ಬೆಂಗಳೂರು |
| 48 | ಚಿದಾನಂದ ಮೂರ್ತಿ ಎಂ. | 1970 | ಸಂಶೋಧನ ತರಂಗ ಸಂ.2 | ಬೆಂಗಳೂರು ವಿಶ್ವವಿದ್ಯಾಲಯ | ಬೆಂಗಳೂರು |
| 49 | ಚಿದಾನಂದ ಮೂರ್ತಿ ಎಂ. | 1997 | ಹೊಸತು ಹೊಸತು | ಕನ್ನಡ ವಿಶ್ವವಿದ್ಯಾಲಯ | ಹಂಪಿ |
| 50 | ಪಂಚಮುಖಿ.ಆರ್.ಎಸ್ | 1976 | ಕರ್ನಾಟಕ ಇತಿಹಾಸ | ಇತಿಹಾಸ ಸಂಶೋಧನ ಮಂಡಳ | ಧಾರವಾಡ |
| 51 | ಪಂಚಮುಖಿ.ಆರ್.ಎಸ್ | 1946 | ಕರ್ನಾಟಕ ಅರಸು ಮನೆತನಗಳು | ಇತಿಹಾಸ ಸಂಶೋಧನ ಮಂಡಳ | ಧಾರವಾಡ |
| 52 | ಪತ್ತಾರ ಶೀಲಾಕಾಂತ | 2000 | ಬಾದಾಮಿ: ಸಾಂಸ್ಕೃತಿಕ ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ | ಹಂಪಿ |
| 53 | ಪರಶಿವಮೂರ್ತಿ.ಡಿ.ವ್ಹಿ | 1999 | ಕನ್ನಡ ಶಾಸನ ಶಿಲ್ಪ | ಕನ್ನಡ ವಿಶ್ವವಿದ್ಯಾಲಯ | ಹಂಪಿ |
| 54 | ಪಾಟೀಲ ಭೋಜರಾಜ | 1995 | ನಾಗರಖಂಡ-70 ಒಂದು ಅಧ್ಯಯನ | ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ | ಆನಂದಪುರಂ |

| | | | | | |
|---|---|---|---|---|---|
| 55 | ಪಾಟೀಲ ಎಸ್.ಪಿ | 1993 | ಚಾವುಂಡರಾಯ ಪುರಾಣ ಒಂದು ಅಧ್ಯಯನ | ವೈಶಾಲಿ ಪ್ರಕಾಶನ | ಧಾರವಾಡ |
| 56 | ಪಾಟೀಲ ಶಿ.ಭಾ | 1995 | ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ | ಬಸವಶ್ರೀ ಪ್ರಕಾಶನ | ಸಂಕೇಶ್ವರ |
| 57 | ಪುಟ್ಟಪ್ಪ ಕೆ.ವ್ಹಿ (ಸಂ) | 1976 | ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯ | ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ | ಮೈಸೂರು |
| 58 | ಬಸವರಾಜ ಎಲ್. (ಸಂ) | 1976 | ಪಂಪನ ಆದಿಪುರಾಣ | ಸೀತಾ ಬುಕ್ ಹೌಸ್ | ಮೈಸೂರು |
| 59 | ಬಿರಾದಾರ.ಎಂ.ಜಿ.(ಸಂ) | 1976 | ಪ್ರೊ.ಕೆ.ಜಿ.ಕುಂದಣಗಾರರ ಲೇಖನಗಳು | ಕನ್ನಡ ಸಾಹಿತ್ಯ ಪರಿಷತ್ತು | ಬೆಂಗಳೂರು |
| 60 | ಬೆಳ್ಳಾವೆ ವೆಂಕಟ ನಾರಾಯಣಪ್ಪ | 1977 | ಪಂಪನ ವಿಕ್ರಮಾರ್ಜುನ ವಿಜಯ | ಮೈಸೂರು ವಿಶ್ವವಿದ್ಯಾಲಯ | ಮೈಸೂರು |

ಆಂಗ್ಲ ಗ್ರಂಥಗಳು


| Sl. No. | Authors Name | Published Year | Title | Name of Publisher | Place of Publication |
|---|---|---|---|---|---|
| 1 | Desai P.B. (Ed) | 1958 | A corpus of inscriptions in the Kannada districts of Hyderabad state, Hyderabad | | |
| 2 | Rice B.L | 1886 to 1904 | Epigraphica Carnatika Vol.I to XVI | Mysore Archaeological Survey | Bangalore (Old Edition) |
| 3 | Gopal B.R | 1924 to 2002 | Epigraphical carnatika Vols. I to XII | Mysore University | Mysore (Revised Ed) |
| 4 | Burges James (Ed) | 1894 | Epigraphica Indica Vols | Thacker Spink and Co | Bombay |
| 5 | Rice B.L. | 1984 | Indian Antiquary Volumes | Swati Publication | Delhi |
| 6 | Krishnamachari C.R | 1935 | The Kannada Inscriptions | | Madras |
| 7 | Panchamukhi R.S. and others | | Karnataka Inscriptions Vols I to VI | KRI K.U. Dharwad | Dharwad |
| 8 | University of Mysore | 1936 | Mysore Archacological Reports | Government Press | Bangalore |
| 9 | Panchamukhi R.S | 1948 | Progress Reports of the KRI for 1935-37 | KRI K.U.Dharwad | Dharwad |
| 10 | Krishna Shastri H | 1923 | South Indian Inscri ptions Vols I to XX | A.S.I | Delhi |

| | | | | | |
|---|---|---|---|---|---|
| 11 | Ritti Shrinivas (Ed) and G.Shelk | 1968 | Inscriptions from Nanded district | Yashavant Mahavidyalay | nanded |
| 12 | Ritti Shrinivas (Ed) and Anand Kumbar | 1988 | Inscriptions from Solapur district | Shrihari Prakashan | Dharwad |
| 13 | Ritti Srinivas & Karavckar A.B. (Ed) | 2000 | Inscriptions from Kollapur district | Kannada University | hampi |
| 14 | Upadhye J.N | 2001 | Kannada Inscriptions from Maharastra | Kannada University | Hampi |
| 15 | Altekar A.S | 1967 | Rastrakutas and their times | Oriental Book Agency | Poona |
| 16 | Altekar A.S | 1972 | State and Government in Ancient India | Motial Banarasidass | New Delhi |
| 17 | Altekar A.S | 1965 | Education in Ancient India | Nandkishore and Bros | Varanasi |
| 18 | Altekar A.S | 1962 | The Position of Women in Ancient Hindu Civilization | Motial Banarasidass | Delhi |
| 19 | Gopal Lallanji | 1989 | The Economic Life of Northern India | Motilal Banarasidas | New Delhi |
| 20 | Krishnamurthy.M.S.<br>Krishnamurthi.K | 1980<br>1982 | The Nolambas<br>Hair Styles in Ancient Indian Art Styles | Mysore University | Mysore<br>Delhi |
| 21 | Krishnamurthi.K | 1985 | Archacology of Indian Musical Instruments | Abhinava | Delhi |
| 22 | Kuppa Swamy G.R | | Economic Conditions in Karnataka (AD973-1336) | Karnataka University | Dharwad |
| 23 | Padma M.B | 1993 | The Position of Women in Mediaeval Karnataka | Prasaranga Mysore University | Mysore |

| | | | | | |
|---|---|---|---|---|---|
| 24 | Arora Rajkumar | 1972 | Historical and Cultural date from the Bhavisya Purana | Streting Publication | New Delhi |
| 25 | Appadorai A. | | Economic Conditions in Southern India | University of Madras | Madras |
| 26 | Basavaraja K.R | 1984 | History and Culture of Karnataka | Chalukya Publication | Dharwad |
| 27 | Basavaraja K.R | 1982 | Administration under the Chalukyas of Kalyana | New Era Publications | Madras |
| 28 | Bhutan J.B | 1964 | Indian Jewellery Ornaments and Decorative Designs | Toparewals | Bombay |
| 29 | Basham A.L | 1998 | The Wonder that was India | Rupe and Co | New Delhi |
| 30 | Balambal V | 1999 | Feudatories of South India (AD 800-1070 AD) | Chugh Publications | Madras |
| 31 | Bhandarkar R.G | 1957 | Early History of the Deccan | Susil Gupta Publication | Calcutta |
| 32 | Buhler (Ed) | 1965 | Bilhana's Vikramankadeva Charita | Suresh Candra Banerji and Amal Kumar Gupta | Bombay |
| 33 | Buhler (Ed) | 1975 | Bilhana's Vikramankadeva Charita | Santosh Kumar Das | Calcutta |

| | | | | | |
|---|---|---|---|---|---|
| 34 | Das S.K | 1933 | The Educational System of the Ancient Hindus | Jaina Vagmaya | Calcutta |
| 35 | Dasgupta D.C | 1943 | Jaina System of Education | Indian Historical Research Institute Publication | Bombay |
| 36 | Dinakar Desai | 1951 | The Mahamandaleshwaras under the Chalukyas of Kalyani | Jaina Samskriti Samrakshaka Sangha | Solapur |
| 37 | Desai P.B | 1957 | Jainism in South India and some Jain Epigraphs | Kannada Research Institute | Dharwad |
| 38 | Desai P.B | 1981 | History of Karnataka (from Pre-History to Unification) | Kannada Research Institute | Hyderabad |
| 39 | Putali Bai N | 1973 | Changing Condition of Women in Andhra | | |
| 40 | Gupta S.P | 1973 | Costumes, Taxtile, Cosmetics in Ancient and Medieval India | | Delhi |
| 41 | Das R.M | 1962 | Women in Manu and his seven Commentators | | Bihar |
| 42 | Jain Devaki | 1975 | Indian Women | | New Delhi |
| 43 | Frances Billington Mary | 1973 | Women in India | | New Delhi |

## ಕನ್ನಡ ನಿಯತಕಾಲಿಕೆಗಳು

- ಕನ್ನಡ ನುಡಿ
- ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ
- ಕರ್ನಾಟಕ ಭಾರತಿ
- ಪ್ರಬುದ್ಧ ಕರ್ನಾಟಕ
- ಶರಣ ಸಾಹಿತ್ಯ
- ಸಾಧನೆ
- ಮಾನವಿಕ ಕರ್ನಾಟಕ
- ಶಿವಾನುಭವ

## ಇಂಗ್ಲೀಷ್ ನಿಯತಕಾಲಿಕೆಗಳು

- Indian Historical Quarterly
- Journal of Oriental Research, Madras
- Journal of the Andhra Historical Research Society
- Journal of the Bombay Branch of the Royal Asiatic Society
- The Journal of Karnataka University (Social Science)
- The Journal of Karnataka University (Humanities)
- Quarterly Journal of the Mythic Society
- The Journal of the Indian History
- Journal of Bhandarkar's Oriental Research Institute

# ಸಂಕ್ಷೇಪಗಳು

| | | |
|---|---|---|
| • ಎ.ಆರ್.ಐ.ಇ. | – | ಎನ್ಯುವಲ್ ರಿಪೋರ್ಟ್ಸ್ ಆನ್ ಇಂಡಿಯನ್ ಎಪಿಗ್ರಫಿ |
| • ಎ.ಆರ್.ಎಸ್.ಐ.ಇ | – | ಎನ್ಯುವಲ್ ರಿಪೋರ್ಟ್ಸ್ ಆನ್ ಸೌತ್ ಇಂಡಿಯನ್ ಎಪಿಗ್ರಫಿ |
| • ಎ.ಇ. | – | ಎಪಿಗ್ರಫಿ ಇಂಡಿಕಾ |
| • ಎ.ಕ | – | ಎಪಿಗ್ರಫಿ ಕರ್ನಾಟಿಕಾ |
| • ಎಸ್.ಐ.ಆಯ್ | – | ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ |
| • ಇ.ಐ | – | ಇಂಡಿಯನ್ ಎಂಟಿಕ್ವೆರಿ |
| • ಜೆ.ಬಿ.ಬಿ.ಆರ್.ಎಸ್. | – | ಜರ್ನಲ್ ಆಫ್ ಬಾಂಬೆ ಬ್ರ್ಯಾಂಚ್ ಆಫ್ ರಾಯಲ್ ಏಶಿಯಾಟಿಕ್ ಸೊಸೈಟಿ |
| • ಕೆ.ಆಯ್. | – | ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್ |
| • ಐ.ಎಫ್.ಎನ್.ಡಿ | – | ಇನ್‌ಸ್ಕ್ರಿಪ್ಷನ್ಸ್ ಪ್ರಾಮ್ ನಾಂದೇಡ ಡಿಸ್ಟ್ರಿಕ್ಟ್ |
| • ಐ.ಎಸ್.ಎನ್.ಡಿ | – | ಇನ್‌ಸ್ಕ್ರಿಪ್ಷನ್ಸ್ ಪ್ರಾಮ್ ಸೋಲಾಪುರ ಡಿಸ್ಟ್ರಿಕ್ಟ್ |
| • ಐ.ಆ.ಸಿ. | – | ಹೈದ್ರಾಬಾದ್ ಆರ್ಕಿಯೋಲಾಜಿಕಲ್ ಸಿರೀಸ್ |
| • ಎ.ಪಿ.ಜಿ.ಎ.ಎಸ್ | – | ಆಂಧ್ರಪ್ರದೇಶ ಗೌವರ್ನಮೆಂಟ್ ಆರ್ಕಿಯೋಲಾಜಿಕಲ್ ಸಿರೀಸ್ |
| • ಎಮ್.ಎ.ಆರ್. | – | ಮೈಸೂರು ಆರ್ಕಿಯೋಲಾಜಿಕಲ್ ರಿಪೋರ್ಟ್ |
| • ಡಿ.ಕೆ.ಡಿ. | – | ಡೈನಾಸ್ಟೀಸ್ ಆಫ್ ಕೆನರೀಸ್ ಡಿಸ್ಟ್ರಿಕ್ಟ್ |
| • ಯು.ಭಾ.ಸಂ. | – | ಯುಗಯಾತ್ರಿ ಭಾರತೀಯ ಸಂಸ್ಕೃತಿ |
| • ಆಯ್.ಎಚ್.ಸಿ. | – | ಇಂಡಿಯನ್ ಹಿಸ್ಟೋರಿಕಲ್ ಕ್ವಾರ್ಟರ್ಲಿ |
| • ಎಚ್ ಆ್ಯಂಡ್ ಸಿ | – | ಹಿಸ್ಟೋರಿಕಲ್ ಆ್ಯಂಡ್ ಕಲ್ಚರಲ್ ಸ್ಟಡೀಸ್ ಆಫ್ ದಿ ರಿಲೀಜನ್ ಎರೌಂಡ್ ಬಸವಕಲ್ಯಾಣ: ಬೇಸ್ಡ್ ಆನ್ ಇನ್‌ಸ್ಕ್ರಿಪ್ಷನ್ಸ್ |

